ಎನ್. ಅನಂತರಂಗಾಚಾರ್, ಎಂ.ಎ.

# ನೇಮಿಚಂದ್ರ

ಪ್ರಚಾರ ಪುಸ್ತಕಮಾಲೆ—೮೦




ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೪

**ಮೈಸೂರು ವಿಶ್ವವಿದ್ಯಾನಿಲಯ**

ಪ್ರಚಾರ ಪುಸ್ತಕಮಾಲೆ—೪೦

# ನೇಮಿಚಂದ್ರ

ಎನ್. ಅನಂತರಂಗಾಚಾರ್, ಎಂ.ಎ.






ಮೈಸೂರು

**ಮೈಸೂರು ವಿಶ್ವವಿದ್ಯಾನಿಲಯ**

೧೯೬೯

ಮೊದಲನೆಯ ಮುದ್ರಣ: ೧೯೫೫
ಎರಡನೆಯ ಮುದ್ರಣ: ೧೯೬೯

೫೦೦೦ ಪ್ರತಿಗಳು

ಬೆಲೆ
ಸಾದಾ ಪ್ರತಿ: ೨೫ ಪೈಸೆ
ಉತ್ತಮ ಪ್ರತಿ: ೩೭ ಪೈಸೆ

ಪ್ರಕಾಶಕರು :
ಡೈರೆಕ್ಟರ್, ಪ್ರಸಾರಾಂಗ
ಮಾನಸಗಂಗೋತ್ರಿ, ಮೈಸೂರು-6

ಮುದ್ರಕರು :
ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್
ಕೃಷ್ಣಮೂರ್ತಿಪುರಂ, ಮೈಸೂರು-೪

# ಮುನ್ನುಡಿ

ಈ ಪ್ರಚಾರ ಪುಸ್ತಕಮಾಲೆ ಪ್ರಾರಂಭವಾಗಿ ಇಂದಿಗೆ ಸುಮಾರು ಇಪ್ಪತ್ತೈದು ವರ್ಷಗಳಾಗಿವೆ. ಈ ಅವಧಿಯಲ್ಲಿ ೭೯ ಪುಸ್ತಿಕೆಗಳು ಈ ಮಾಲೆಯಲ್ಲಿ ಪ್ರಕಟವಾಗಿವೆ. ಕಾಲಾವಧಿಯನ್ನು ಗಮನಿಸಿದರೆ ಈಗ ಹೊರಬಿದ್ದಿರುವ ಕಿರುಹೊತ್ತಗೆಗಳ ಸಂಖ್ಯೆ ಈಗಿರುವುದಕ್ಕಿಂತಲೂ ದ್ವಿಗುಣವೊ ತ್ರಿಗುಣವೊ ಆಗಿರಬೇಕಾಗಿತ್ತೆಂದು ಹೇಳಬಹುದು. ಆದರೂ ಅವುಗಳ ಗುಣವನ್ನೂ ಅವು ಮಾರಾಟವಾಗುತ್ತಿರುವ ವೇಗವನ್ನೂ ಗಮನಿಸಿದರೆ ಈ ಮಾಲೆಯ ಉಪಯುಕ್ತತೆ ಮತ್ತು ಜನಪ್ರಿಯತೆ ವ್ಯಕ್ತವಾಗುತ್ತದೆ. ಸಾಮಾನ್ಯವಾಗಿ ಪ್ರತಿಯೊಂದು ಪುಸ್ತಿಕೆಯೂ ಮೂರು ನಾಲ್ಕು ಸಾರಿ ಮುದ್ರಿತವಾಗಿದೆ. ದಿನೇ ದಿನೇ ಈ ಮಾಲೆಯ ಬಗೆಗೆ ಜನರ ವಿಶ್ವಾಸಾದರಗಳು ಅಧಿಕವಾಗುತ್ತಿವೆ. " ಈ ತಿಂಗಳು ಏನಾದರೂ ಹೊಸ ಪುಸ್ತಿಕೆ ಬಂದಿದೆಯೆ? ಮುಗಿದು ಹೋಗಿರುವ ಪುಸ್ತಿಕೆಗಳು ಅಚ್ಚಾಗಿವೆಯೆ? " ಎಂದು ಮೇಲಿಂದ ಮೇಲೆ ಜನ ಕೇಳುತ್ತಿರುತ್ತಾರೆ. ಇದು ನಿಜವಾಗಿಯೂ ಸಂತೋಷದ ಸಂಗತಿ; ನಾಡಿನ ಪ್ರಗತಿಯ ಒಂದು ಚಿಹ್ನೆ.

ನಾಡಿನಲ್ಲಿ ದಿನೇ ದಿನೇ ವಿದ್ಯಾವಂತರ ಮತ್ತು ಅಕ್ಷರಸ್ಥರ ಸಂಖ್ಯೆ ಬೆಳೆಯುತ್ತಿದೆ. ಕೇವಲ ಸಾಕ್ಷರತೆಯಿಂದ ಮಹತ್ತಾದ ಪ್ರಯೋಜನವೇನೂ ಲಭಿಸದು. ಸಾಕ್ಷರತೆ ಬೇರೊಂದು ಸಿದ್ಧಿಗಾಗಿ ಸಾಧನವೇ ಹೊರತು ಅದೇ ಪರಮಗುರಿಯಲ್ಲ; ಜ್ಞಾನಸಂಪಾದನೆಯೇ ಅದರ ಪರಮಗುರಿ. ಈ ಗುರಿಯ ಸಾಧನೆಗಾಗಿ ಸಕಲ ಅನುಕೂಲತೆಗಳನ್ನು ಕಲ್ಪಿಸುವುದು ವಿಶ್ವವಿದ್ಯಾನಿಲಯದಂಥ ಸಂಸ್ಥೆಗಳ ಆದ್ಯಕರ್ತವ್ಯ. ಈ ಮೂಲಕ ವಿಶ್ವವಿದ್ಯಾನಿಲಯದ ಜ್ಞಾನವಾಹಿನಿ ನಾಡಿನ ಮೂಲೆಮೂಲೆಗೆಲ್ಲ ಹರಿದು, ಸಮಷ್ಟಿಪ್ರಜ್ಞೆ ವಿಕಾಸಗೊಳ್ಳಲನುಕೂಲವಾಗುತ್ತದೆ.

ಈ ಮಾಲೆಯಿಂದ ಸಾಮಾನ್ಯ ಜನರಲ್ಲಿ ಜ್ಞಾನಪ್ರಸಾರ ಕಾರ್ಯ ತಕ್ಕಮಟ್ಟಿಗೆ ಯಶಸ್ವಿಯಾಗಿ ನಡೆದಿರುವಂತೆಯೆ ಕನ್ನಡದಲ್ಲಿ ವಿಜ್ಞಾನ ಸಂಬಂಧವಾದ ವಿಷಯುಗಳನ್ನು ಸುಲಭವಾಗಿ ಸರಳ ವಾಗಿ ಹೇಳಬಹುದು ಮತ್ತು ಕನ್ನಡ ವೈಜ್ಞಾನಿಕ ಭಾಷೆಯಾಗ ಬಲ್ಲುದು ಎಂಬ ಅಂಶ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಈ ಪುಸ್ತಿಕೆ ಗಳ ಪಟ್ಟಿಯನ್ನೊಮ್ಮೆ ಓದಿದರೆ ಸಂದೇಹವಾದಿಗಳ ಶಂಕೆ ಸಂಪೂರ್ಣವಾಗಿ ನಿವಾರಣೆಗೊಂಡು ಧೈರ್ಯ ಮೂಡದಿರದು. ಇವುಗಳಲ್ಲಿ ೫೫ ಪುಸ್ತಿಕೆಗಳು ಭೌತವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿವಿಜ್ಞಾನ, ಸಮಾಜವಿಜ್ಞಾನ, ವೈದ್ಯ ವಿಜ್ಞಾನ, ಗಣಿತವಿಜ್ಞಾನ, ಇತಿಹಾಸ ಮೊದಲಾದುವುಗಳಿಗೆ ಸಂಬಂಧಿಸಿದವು. ಉಳಿದ ೨೪ ಪುಸ್ತಿಕೆಗಳು ಸಾಹಿತ್ಯ ಮತ್ತು ಸಾಹಿತ್ಯವಿಮರ್ಶೆಗೆ ಸಂಬಂಧಿಸಿದುವು. ಇವುಗಳ ಗ್ರಂಥಕರ್ತರು ಪ್ರಮುಖವಾಗಿ ವಿಶ್ವವಿದ್ಯಾನಿಲಯದಲ್ಲಿ ಹತ್ತಿಪ್ಪತ್ತು ವರ್ಷಗಳ ಕಾಲ ಪಾಠ ಹೇಳಿ ನುರಿತಿರುವ ಘನವಿದ್ವಾಂಸರು. ಬಹಳ ಹಿಂದೆಯೇ ವೈಜ್ಞಾನಿಕ ಗ್ರಂಥಗಳ ರಚನೆಗೆ ಕೈಹಾಕಿ ಕನ್ನಡ ವೈಜ್ಞಾನಿಕ ಭಾಷೆಯಾಗುವ ಸಾಮರ್ಥ್ಯವನ್ನು ಪಡೆದಿದೆ, ವಿಶ್ವ ವಿದ್ಯಾನಿಲಯದಲ್ಲಿ ಶಿಕ್ಷಣಮಾಧ್ಯಮವಾಗುವ ಶಕ್ತಿಯನ್ನು ಪಡೆ ದಿದೆ ಎಂದು ತೋರಿಸಿಕೊಟ್ಟಿದ್ದಾರೆ. ಅವರೆಲ್ಲ ಅಭಿನಂದ ನಾರ್ಹರು.

ಈ ಮಾಲೆಯ ಕಾರ್ಯ ತ್ವರಿತಗೊಂಡು, ವಿಸ್ತಾರಗೊಂಡು ಪುಸ್ತಕಗಳ ಸಂಖ್ಯೆ ದಿನೇ ದಿನೇ ಬೆಳೆಯಬೇಕೆಂದೂ, ಇದರಿಂದ ಸಾಮಾನ್ಯ ಜನತೆ ಸಂಪೂರ್ಣ ಪ್ರಯೋಜನ ಪಡೆದು ಸಮಷ್ಟಿ ಪ್ರಜ್ಞೆ ಸರ್ವತೋಮುಖವಾಗಿ ವಿಕಾಸಗೊಳ್ಳಬೇಕೆಂಬುದೂ ವಿಶ್ವ ವಿದ್ಯಾನಿಲಯದ ಆಸೆ. ಕನ್ನಡನಾಡು ಒಂದುಗೂಡಿರುವ ಈ

ಶಕಮುಹೂರ್ತದಲ್ಲಿ ಕನ್ನಡನುಡಿ ಆಡಳಿತದ ಭಾಷೆಯಾಗಿ, ವ್ಯವಹಾರದ ಭಾಷೆಯಾಗಿ, ಶಿಕ್ಷಣದ ಭಾಷೆಯಾಗಿ, ಜನತೆಯ ಸಂಸ್ಕೃತಿವಿಕಾಸಸಾಧನದ ಭಾಷೆಯಾಗಿ ಮುಂದುವರಿಯುವುದರಲ್ಲಿ ಸಂದೇಹವಿಲ್ಲ. ವಿಶ್ವವಿದ್ಯಾನಿಲಯದ ಈ ಸೇವೆಯನ್ನು ಕರ್ನಾಟಕ ಸಂಪೂರ್ಣವಾಗಿ ತನ್ನ ಮೇಲ್ಮೈಗೂ ಏಳ್ಗೆಗೂ ಬಳಸಿಕೊಳ್ಳುತ್ತದೆಂದು ನಾವು ಹಾರೈಸುತ್ತೇವೆ.

ಮೈಸೂರು
೫-೧-೫೯

ಕೆ. ವಿ. ಪುಟ್ಟಪ್ಪ
ವೈಸ್-ಛಾನ್ಸಲರ್

## ವಿಷಯಾನುಕ್ರಮಣಿಕೆ

# ನೇಮಿಚಂದ್ರ

## ಹಿನ್ನೆಲೆ

ಕನ್ನಡ ಸಾಹಿತ್ಯದ ಉಗಮವು ಬಹುಶಃ ಒಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿದ್ದ ನೃಪತುಂಗನಿಗಿಂತ ಒಂದೆರಡು ಶತಮಾನಗಳ ಹಿಂದೆ ಇದ್ದಿರಬಹುದಾದರೂ ಅದರ ಸ್ಪಷ್ಟವಾದ ರೂಪರೇಖೆಗಳನ್ನೂ, ಧ್ಯೇಯಸಾಧನೆಗಳನ್ನೂ, ಆಕಾರ ಅವಸ್ಥೆಗಳನ್ನೂ ಪ್ರೇರಣಶಕ್ತಿಗಳನ್ನೂ, ಸ್ಪಷ್ಟವಾಗಿ ಕಾಣುವುದು ಹತ್ತನೆಯ ಶತಮಾನದಲ್ಲಿ. ಹತ್ತನೆಯ ಶತಮಾನವು ಕನ್ನಡ ಸಾಹಿತ್ಯ ದೃಷ್ಟಿಯಿಂದ ಸುವರ್ಣಯುಗ. ಕನ್ನಡ ಸಾಹಿತ್ಯದ ಸರ್ವತೋಮುಖವಾದ ಅಭಿವೃದ್ಧಿಯನ್ನು ಆಗ ಕಾಣಬಹುದು. ಈ ಶತಮಾನದ ಪೂರ್ವಾರ್ಧದಲ್ಲಿ ರಾಷ್ಟ್ರಕೂಟರು ತಮ್ಮ ಅದ್ಭುತ ಶಕ್ತಿಯನ್ನು ಭರತಖಂಡದ ಅನೇಕ ಭಾಗಗಳಲ್ಲಿ ಪ್ರದರ್ಶಿಸಿ ತಮ್ಮ ಚಕ್ರವರ್ತಿತ್ವವನ್ನು ಸ್ಥಾಪಿಸಿಕೊಂಡರು. ಶತಮಾನದ ಉತ್ತರಾರ್ಧದಲ್ಲಿ ಕಲ್ಯಾಣಿಚಾಳುಕ್ಯವಂಶದ ಮೂಲಪುರುಷನಾದ ತೈಲಪನು ರಾಷ್ಟ್ರಕೂಟರನ್ನು ಸೋಲಿಸಿ ತಾನೇ ಚಕ್ರವರ್ತಿಯಾದನು. ಅವನೂ ಅವನ ಪುತ್ರನಾದ ಇರಿವಬೆಡಂಗ ಸತ್ಯಾಶ್ರಯನೂ ತಮ್ಮ ರಾಜ್ಯವನ್ನು ಗುಜರಾತಿನವರೆಗೆ ವಿಸ್ತರಿಸಿದರು. ಚಾವುಂಡರಾಯನಂತಹ ಸೇನಾನಿಗಳೂ ಶಂಕರಗಂಡನಂತಹ ಮಂತ್ರಿಗಳೂ ರಾಜ್ಯವಿಸ್ತರಣದ ಕಾರ್ಯದಲ್ಲಿ ಸಹಾಯಮಾಡಿದರು. ಇವರಲ್ಲಿ ಅನೇಕರು ಜೈನಧರ್ಮಾನುಯಾಯಿಗಳು. ಅಲ್ಲದೆ ರಾಜರುಗಳು ಸ್ವತಃ ಕಲಿಗಳಾಗಿದ್ದುದಲ್ಲದೆ ಕವಿಗಳೂ ಕವಿಜನಾಶ್ರಯರೂ ಆಗಿದ್ದರು. ಪ್ರಜೆಗಳೂ

ಶೂರರೂ ಧಾರ್ಮಿಕರೂ ಆದುದರಿಂದ ಅವರ ದೇಶಪ್ರೇಮ, ರಾಜಭಕ್ತಿ, ಧರ್ಮನಿಷ್ಠೆ ಅನ್ಯಾದೃಶವಾಗಿ ಆ ಕಾಲದ ಗ್ರಂಥಗಳಲ್ಲಿಯೂ ಶಾಸನಗಳಲ್ಲಿಯೂ ಪ್ರತಿಬಿಂಬಿತವಾಗಿವೆ. ರಾಜರ ಮತ್ತು ಧರ್ಮವೀರರ ಆಶ್ರಯದಲ್ಲಿದ್ದ ಗ್ರಂಥಕರ್ತರೂ ಆಶ್ರಯದಾತರಂತೆಯೇ ಕವಿಗಳೂ ಕಲಿಗಳೂ ಆಗಿ ಧರ್ಮೋದ್ಧಾರಕ್ಕಾಗಿ ಧಾರ್ಮಿಕ ಗ್ರಂಥಗಳನ್ನೂ ಆಶ್ರಯದಾತರುಗಳ ಕೀರ್ತಿಸ್ಥಾಪನೆಗಾಗಿ ಲೌಕಿಕ ಗ್ರಂಥಗಳನ್ನೂ ರಚಿಸಿ ಮುಂದಿನ ಪೀಳಿಗೆಯವರಿಗೆ ಆದರ್ಶರಾದರು. ಭಿನ್ನಮತಗಳ ಘರ್ಷಣೆಯಿದ್ದರೂ ಪೂರ್ಣವಾದ ಮತಸಹಿಷ್ಣುತೆಯಿತ್ತು. ಕವಿಪುಂಗವರಾದ ಪಂಪರನ್ನಾದಿಗಳು ತಮ್ಮ ಅದ್ಭುತ ಪ್ರತಿಭೆಯಿಂದಲೂ ಉಜ್ವಲ ಧರ್ಮಾಭಿಮಾನದಿಂದಲೂ ಕನ್ನಡದ ಕಾವ್ಯರತ್ನಗಳನ್ನು ರಚಿಸಿ ಕನ್ನಡ ಸಾಹಿತ್ಯದ ಸೀಮಾಪುರುಷರಾದರು. ಮೇರುಸದೃಶವಾದ ಅವರ ಗ್ರಂಥಗಳು ಆಮೇಲೆ ಬಂದವರಿಗೆ ಅನುಕರಣೀಯವಾದುವು.

ಈ ಪರಿಸ್ಥಿತಿ ಬಹುಕಾಲ ಉಳಿಯಲಿಲ್ಲ. ಒಂದೆರಡು ಶತಮಾನಗಳಲ್ಲಿ ಕರ್ಣಾಟಕದ ರಾಜಕೀಯ ಧಾರ್ಮಿಕಸ್ಥಿತಿಗಳು ವ್ಯತ್ಯಾಸಗೊಂಡವು. ೧೨-೧೩ನೆಯ ಶತಮಾನಗಳ ವೇಳೆಗೆ ತೀರ ಭಿನ್ನವಾದ ಚಿತ್ರವು ಕಣ್ಣಿಗೆ ಗೋಚರವಾಗುತ್ತದೆ. ೧೨ನೆಯ ಶತಮಾನದ ಆದಿಭಾಗದಲ್ಲಿ ಕರ್ಣಾಟಕದ ಉತ್ತರಭಾಗದಲ್ಲಿ ಪಶ್ಚಿಮ ಚಾಳುಕ್ಯರೂ ಅವರಿಗೆ ಸಾಮಂತರಾಗಿ ಗಂಗವಾಡಿಯಲ್ಲಿ ಹೊಯ್ಸಳರೂ ರಾಜ್ಯಭಾರ ಮಾಡುತ್ತಿದ್ದರು. ಈ ಮನೆತನದವರಿಗೂ ಮೂಡಣ ಚಾಳುಕ್ಯರಿಗೂ ದಕ್ಷಿಣದ ಚೋಳರಿಗೂ ಆಗಾಗ ಘರ್ಷಣೆಗಳುಂಟಾಗುತ್ತಲೇ ಇದ್ದವು. ಆದರೆ ಚಾಳುಕ್ಯರಲ್ಲಿ ಪ್ರಖ್ಯಾತನಾದ ಆರನೆಯ ವಿಕ್ರಮಾ

ದಿತ್ಯನು ದೀರ್ಘಕಾಲ ರಾಜ್ಯಭಾರಮಾಡಿ ತನ್ನ ಆಳ್ವಿಕೆಯಲ್ಲಿ ದೇಶದಲ್ಲಿದ್ದ ಅಂತಃಕಲಹಗಳನ್ನೂ ದೇಶಕ್ಷೋಭೆಗಳನ್ನೂ ಅಡಗಿಸಿ ದೇಶದಲ್ಲಿ ಸುಖಶಾಂತಿಗಳನ್ನು ನೆಲೆಗೊಳಿಸಿದನು. ಅವನ ತರುವಾಯ ಬಂದ ಮುಮ್ಮಡಿ ಸೋಮೇಶ್ವರನ ಕಾಲದಲ್ಲಿಯೂ ಈ ಶಾಂತವಾತಾವರಣ ಮುಂದುವರಿಯಿತು. ಮುಂದೆ ರಾಜನಾದ ಇಮ್ಮಡಿ ಜಗದೇಕಮಲ್ಲನೂ ಬಹು ಪ್ರತಾಪಶಾಲಿ. ಈತನು ಚೋಳರನ್ನೂ ಹೊಯ್ಸಳರನ್ನೂ ಸೋಲಿಸಿ ಚಾಳುಕ್ಯ ರಾಜ್ಯವನ್ನು ಭದ್ರಗೊಳಿಸಿದನು. ಬಹುಶಃ ಈ ಕಾಲದಲ್ಲಿ ಚಾಳುಕ್ಯರಿಗೂ ಹೊಯ್ಸಳರಿಗೂ ಸ್ಪರ್ಧೆ ಪ್ರಾರಂಭವಾಗಿರಬೇಕು. ಚಾಳುಕ್ಯರ ಸಾಮಂತರಲ್ಲಿ ಪ್ರಬಲನಾಗಿದ್ದ ಬಿಜ್ಜಳನ. ಮುಂದೆ ಬಂದ ಮುಮ್ಮಡಿ ತೈಲಪ, ನೂರ್ಮಡಿ ತೈಲ ಎಂಬುವರನ್ನು ಮೂಲೆಗೊತ್ತಿ ತಾನೇ ಚಕ್ರವರ್ತಿಯಾಗಿ ಕಾಲಚೂರ್ಯರ ಅಧಿಕಾರವನ್ನು ಸ್ಥಾಪಿಸಿದನು. ಅವನ ಮಗನಾದ ರಾಯಮುರಾರಿ ಸೋಯಿದೇವನೂ ಮೊಮ್ಮಗನಾದ ಸೋಮೇಶ್ವರನೂ ದಕ್ಷರಾಗಿದ್ದುದರಿಂದ ರಾಜ್ಯದಲ್ಲಿ ಶಾಂತಿಸ್ಥಾಪನೆಗೆ ಬಹು ಸಹಾಯಕಾರಿಗಳಾದರು. ಇವರಾದ ಮೇಲೆ - ಪುನಃ ಚಾಳುಕ್ಯಾಧಿಕಾರ ಸ್ಥಾಪನೆಗೆ ಪ್ರಯತ್ನಗಳೂ ನಡೆದರೂ ಆ ವೇಳೆಗೆ ಪ್ರಬಲರಾಗಿದ್ದ ಹೊಯ್ಸಳರೂ ಯಾದವರೂ ಚಾಳುಕ್ಯ ವಂಶವನ್ನು ನಿರ್ನಾಮಗೊಳಿಸಿ ಚಾಳುಕ್ಯ ರಾಜ್ಯವನ್ನು ತಮ್ಮ ತಮ್ಮಲ್ಲಿಯೇ ಹಂಚಿಕೊಂಡರು. ಚಾಳುಕ್ಯ ವಂಶವೂ ಅದರ ಅವನತಿಗೆ ಕಾರಣರಾದ ಕಾಲಚೂರ್ಯವಂಶವೂ ನಾಶವಾದವು. ಹೊಯ್ಸಳರು, ಕರ್ಣಾಟಕ ರಾಜ್ಯ ರಮಾರಮಣರಾಗಿ ಶಾಂತಿ ವೈಭವಗಳಿಂದ ರಾಜ್ಯವಾಳಲು ಪ್ರಾರಂಭಮಾಡಿದರು. ಮೇಲೆ ಹೇಳಿದ ರಾಜರುಗಳೆಲ್ಲ ಸ್ವತಃ ಕವಿಗಳೂ ಕವಿಜನಾಶ್ರಯರೂ

ಮತಸಹಿಷ್ಣುಗಳೂ ಆಗಿದ್ದುದರಿಂದ ಸಾಹಿತ್ಯರಚನೆಗೆ ಪ್ರೋತ್ಸಾಹ ವೇನೂ ಕಡಮೆಯಾಗಿಲ್ಲ.

ಧಾರ್ಮಿಕ ಕ್ಷೇತ್ರದಲ್ಲಿ ಮತ್ತೂ ಹೆಚ್ಚಿನ ಪರಿವರ್ತನೆಗಳಾದುವು. ಹಿಂದಿನಿಂದ ಬೆಳೆದುಬಂದ ಜೈನಮತವು ಶಿಲವಾಗುತ್ತ ಬಂದಿತು. ಬಹುಶಃ ಆರನೆಯ ವಿಕ್ರಮಾದಿತ್ಯನು ಮೊದಲು ಜೈನನಾಗಿದ್ದು ಆಮೇಲೆ ಶೈವನಾಗಿರಬೇಕು. ಅವನ ಕಾಲದಲ್ಲಿ ಕಾಳಾಮುಖರೆಂಬ ಶೈವಪಂಥದವರು ಪ್ರಬಲರಾದರು. ಇವರ ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳಿಂದ ಜನರಲ್ಲಿ ಇವರಿಗೆ ವಿಶೇಷ ಗೌರವವುಂಟಾಯಿತು. ಇದೇ ಕಾಲದಲ್ಲಿ ತಮಿಳು ನಾಡಿನಲ್ಲಿ ಹುಟ್ಟಿ ಬೆಳೆದ ರಾಮಾನುಜಾಚಾರ್ಯರು ಚೋಳರ ಹಿಂಸೆಯನ್ನು ಸಹಿಸಲಾರದೆ ಹೊಯ್ಸಳ ರಾಜ್ಯಕ್ಕೆ ಬಂದು ಜೈನನಾಗಿದ್ದ ಬಿಟ್ಟಿದೇವನನ್ನು ವೈಷ್ಣವ ವಿಷ್ಣುವರ್ಧನನ್ನಾಗಿಸಿ ತಮ್ಮ ಮತವನ್ನು ಕನ್ನಡ ನಾಡಿನಲ್ಲಿ ಪ್ರಚಾರ ಮಾಡ ತೊಡಗಿದರು. ಜೊತೆಯಲ್ಲಿಯೇ ತಮಿಳು ದೇಶದ ಶೈವಮತವೂ ಕರ್ಣಾಟಕದಲ್ಲಿ ತನ್ನ ಪ್ರಭಾವವನ್ನು ಬೀರಲು ಮೊದಲು ಮಾಡಿತು. ಅಲ್ಲದೆ ಭಾರತದ ಬೇರೆ ಬೇರೆಯ ಭಾಗಗಳಿಂದ ಕಾಶ್ಮೀರದ ಶೈವರು, ಪಾಶುಪತಿಗಳು, ಸೌರರು, ಗಾಣಾಪತ್ಯರು, ಆರಾಧ್ಯರು ಎಂಬ ಭಿನ್ನ ಭಿನ್ನ ಪಂಥಗಳು ಬಂದು ಕರ್ಣಾಟಕ ದಲ್ಲಿ ಮನೆಮಾಡಿದುವು. ಇವುಗಳಲ್ಲೆಲ್ಲಾ ಒಂದು ಐಕ್ಯಮತ್ಯ ವನ್ನುಂಟುಮಾಡಲೂ ಮತ್ತು ಉತ್ತಮ ಸಮಾಜವನ್ನು ಭದ್ರ ವಾದ ತಳಹದಿಯ ಮೇಲೆ ಕಟ್ಟಲೂ ಇವುಗಳೆಲ್ಲದರ ಸಾರವನ್ನು ಸಂಗ್ರಹಿಸಿ ಬಸವೇಶ್ವರರು ವೀರಶೈವ ಮತವನ್ನು ಸ್ಥಾಪಿಸಿದರು. ಇಷ್ಟೇ ಅಲ್ಲದೆ ಮಧ್ವಾಚಾರ್ಯರಿಂದ ಸ್ಥಾಪಿತವಾದ ದಾಸಕೂಟ ದವರೂ ತಮ್ಮ ವೈಷ್ಣವ ಪಂಥವನ್ನು ಜನಪ್ರಿಯವಾಗುವ ರೀತಿಯಲ್ಲಿ ಪ್ರಚಾರಪಡಿಸಿದ್ದರು.

ಇವೆಲ್ಲದರ ಪ್ರಭಾವ ಆ ಕಾಲದ ಸಾಹಿತ್ಯದ ಮೇಲೆ ಪರಿಣಾಮ ಬೀರದಿರಲಿಲ್ಲ. ಸಾಹಿತ್ಯರಚನೆಯ ಪ್ರಮಾಣ ಕಡಮೆಯಾಗಿದ್ದರೂ ಕಾವ್ಯದೃಷ್ಟಿ, ಉದ್ದೇಶ, ಆಕಾರ ವ್ಯತ್ಯಾಸವಾಯಿತು. ಹೊಸ ಹೊಸ ಪಂಥದವರು ತಮ್ಮ ಧರ್ಮವನ್ನು ಸಾಮಾನ್ಯ ಜನಗಳಲ್ಲಿ ಪ್ರಚಾರಮಾಡುವುದಕ್ಕಾಗಿ ಭಾಷೆಯ ಬಿಗಿಯನ್ನು ಕಡಮೆಮಾಡಿ ಅವರಿಗೆ ತಿಳಿಯುವ ಸರಳಭಾಷೆಯಲ್ಲಿ ಹೊಸ ಸಾಹಿತ್ಯರೂಪಗಳನ್ನು ಕಲ್ಪಿಸಿಕೊಂಡು ಕೃತಿಗಳನ್ನು ರಚಿಸಲು ಮೊದಲುಮಾಡಿದರು. ಸ್ವಧರ್ಮದ ಶ್ರೇಷ್ಠತ್ವವನ್ನು ಸಿದ್ಧಾಂತಗೊಳಿಸುವ ಕೋಲಾಹಲದಲ್ಲಿ ಅನ್ಯಧರ್ಮದ ಅವಹೇಳನವು ಪರಮಾವಧಿಯನ್ನು ಮುಟ್ಟಿತು. ಈ ಕಾಲದ ಜೈನ ಕವಿಗಳು ಈ ತತ್ತ್ವಕ್ಕೆ ಅಪವಾದವೇನೂ ಅಲ್ಲ. ಅವರಿಗೆ ಮೊದಲಿದ್ದ ಧರ್ಮದ ಕಾವು ಬಹುಮಟ್ಟಿಗೆ ಕಡಮೆಯಾಯಿತು. ಪ್ರತಿಭೆಗೆ ಬದಲಾಗಿ ಪಾಂಡಿತ್ಯವು ಪ್ರಾಧಾನ್ಯವನ್ನು ಪಡೆಯಿತು. ಅವರು ಹಳೆಯ ಚಂಪೂ ಶೈಲಿಯನ್ನು ತಕ್ಷಣ ಬಿಡಲು ಸಾಧ್ಯವಾಗಲಿಲ್ಲ. ಶೈವ ವೈಷ್ಣವ ಮತಗಳ ಮಧ್ಯದಲ್ಲಿ ತಮ್ಮ ಮತದ ವೈಶಿಷ್ಟ್ಯಗಳನ್ನು ಸ್ಥಾಪಿಸುವುದಕ್ಕಾಗಿ ಅವರು ಪರಮತವನ್ನು ಅವಹೇಳನಮಾಡುವ ಅನೇಕ ಗ್ರಂಥಗಳನ್ನು ಬರೆಯತೊಡಗಿದರು. ಬಹು ಆಕರ್ಷಕವಾದ ಕಥಾಶೈಲಿಯಲ್ಲಿ ರಚಿತವಾಗಿರುವ ನಯಸೇನನ 'ಧರ್ಮಾಮೃತ'ವೂ ಬಹು ವ್ಯಂಗ್ಯ ವಿಡಂಬನಗಳಿಂದ ಕೂಡಿ ಹರಿತವಾದ ಭಾಷೆಯಲ್ಲಿ ರಚಿತವಾಗಿರುವ ವೃತ್ತವಿಲಾಸನ 'ಧರ್ಮಪರೀಕ್ಷೆ'ಯೂ ಬ್ರಹ್ಮಶಿವನ 'ಸಮಯಪರೀಕ್ಷೆ'ಯೂ ಈ ಜಾತಿಯ ಗ್ರಂಥಗಳು. ಇವುಗಳಲ್ಲಿ ಅಲ್ಲಲ್ಲಿ ಪ್ರಾಸಂಗಿಕವಾಗಿ ಕಾವ್ಯದ ಮಿಣುಕುಗಳು ಕಂಡು

ಬಂದರೂ ಇವುಗಳ ರಚನೆಯ ಉದ್ದೇಶ ಸಾಹಿತ್ಯರಸಾಸ್ವಾದನೆಯಲ್ಲ; ಧರ್ಮಸಂಸ್ಥಾಪನೆ.

ಲೌಕಿಕ ಗ್ರಂಥಗಳ ಧ್ಯೇಯ, ಸಾಧನೆಗಳಲ್ಲಿಯೂ ದೃಷ್ಟಿ ಮಾರ್ಪಾಡಾಯಿತು. ದೇಶದಲ್ಲಿ ಶಾಂತಿ ಸೌಭಾಗ್ಯಗಳ ಸ್ಥಾಪನೆಯ ಫಲವಾಗಿ ಪೌರುಷ ಪ್ರದರ್ಶನಕ್ಕೆ ಆವಶ್ಯಕತೆಯು ಕಡಮೆಯಾಯಿತು. ಅದರೊಡನೆಯೇ ಪ್ರಜೆಗಳಿಗೂ ಪಾಲಕರಿಗೂ ವೀರರಸ ಪ್ರತಿಪಾದನೆಯಲ್ಲಾಗಲಿ ಅನುಭವದಲ್ಲಿಯಾಗಲಿ ಉತ್ಸಾಹವು ಕಡಮೆಯಾಯಿತು. ರಾಜರೂ ಜನಗಳೂ ನಿಸ್ಸತ್ವರಾದರೆಂದು ಹೇಳಿದರೆ ಸತ್ಯದೂರವಾಗಲಾರದು. ಕವಿಗಳಂತೂ ತಮ್ಮ ಕಲಿತನಕ್ಕೆ ಪ್ರಾಶಸ್ತ್ಯವನ್ನು ಕೊಡಲಿಲ್ಲ. ವಿರಾಮಕಾಲದ ಸತ್ವಹೀನವಾದ ಮನಸ್ಸು ಸ್ವಭಾವವಾಗಿಯೇ ಶೃಂಗಾರದ ಕಡೆ ಹರಿಯಿತು. ಜನಜೀವನವು ಸಾಹಿತ್ಯದ ಮೇಲೆಯೂ ಸಾಹಿತ್ಯವು ಜನಜೀವನದ ಮೇಲೆಯೂ ಪರಸ್ಪರ ಪ್ರಭಾವಶಾಲಿಗಳಾಗಿರುವುದರಿಂದ ಆ ಕಾಲದ ಜನಗಳಿಗೆ ಬೇಕಾದ ಗ್ರಂಥಗಳನ್ನು ರಚಿಸಲು ಕವಿಗಳು ಉದ್ಯುಕ್ತರಾದರು.

## ಕವಿಯ ಸ್ವವಿಷಯ

ನೇಮಿಚಂದ್ರನು ಈ ಯುಗದ ಪ್ರತಿನಿಧಿ. ಪ್ರಾಚೀನ ಕಾಲದಿಂದ ಬಂದ ಜೈನ ಕವಿಗಳ ಸಂಪ್ರದಾಯಕ್ಕನುಗುಣವಾಗಿ ಒಂದು ಧಾರ್ಮಿಕ ಗ್ರಂಥವನ್ನೂ ಒಂದು ಲೌಕಿಕ ಗ್ರಂಥವನ್ನೂ ಬರೆದಿದ್ದಾನೆ. 'ನೇಮಿನಾಥ ಪುರಾಣ' ಅಥವಾ 'ಅರ್ಧನೇಮಿ' ಎಂಬುದು ಧಾರ್ಮಿಕ ಗ್ರಂಥ. 'ಲೀಲಾವತಿ'ಯೇ ಲೌಕಿಕ ಗ್ರಂಥ. ಈತನು ತನ್ನ ಗ್ರಂಥಗಳಲ್ಲಿ ಪಂಪ ರನ್ನರಂತೆ ತನ್ನ ಕುಲ, ಗೋತ್ರ, ಗುರು, ತಂದೆ, ತಾಯಿ, ಮತ ಮೊದ

ಲಾದುವುಗಳ ವಿಷಯವಾಗಿ ಏನನ್ನೂ ಹೇಳಿಕೊಂಡಿಲ್ಲ. ಲೀಲಾವತಿಯ ಕೊನೆಯಲ್ಲಿ ಬರುವ

'ಅಂಬುಧಿವೇಷ್ಟಿತಾವನಿಗೆ ಲಕ್ಷ್ಮಣದೇವನೆ ರಾಜನೆಂದು ಲೋಕಾಂಬಿಕೆಯಪ್ಪ ಪುಣ್ಯಸತಿ ಚಂದಲದೇವಿಯೆ ದೇವಿಯೆಂದು ಸೇವ್ಯಂ ಬುಧನೇಮಿಚಂದ್ರನೆ ಕವೀಂದ್ರಂ' ಎಂದೂ

'ಧರೆಯಂ ರಕ್ಷಿಸುತಿರ್ಕೆ ಲಕ್ಕ ಬರಿಸಂ ಲಕ್ಷ್ಮೀಧರೋ-
ರ್ವೀಶ್ವರಂ
ಸಿರಿಯಂತಾತನ ತೋಳೊಳಿರ್ಕೆ ಸತತಂ ಶ್ರೀ ಚಂದ್ರಿಕಾದೇವಿ'

ಎಂದೂ ಹೇಳಿರುವುದರಿಂದ ಈತನು ಲಕ್ಷ್ಮಣರಾಜನ ಆಶ್ರಯದಲ್ಲಿ ಈ ಗ್ರಂಥವನ್ನು ರಚಿಸಿರಬೇಕು. ಸುಮಾರು ೧೧೪೦ರಲ್ಲಿ ನೇಮಿನಾಥಪುರಾಣವನ್ನು ರಚಿಸಿರುವ ಕರ್ಣಪಾರ್ಯನು ತನ್ನ ಗ್ರಂಥಾಂತ್ಯದ ಪದ್ಯದಲ್ಲಿ 'ತಾರಾಚಳಪ್ರಸ್ಫುರಕೀರ್ತಿ ಶ್ರೀವಿಳಾಸಂ ಸಕಲಗುಣಗಣಾವಾಸನಾಗಿರ್ದ ಲಕ್ಷ್ಮೀಧರನಿಂ ಸಂಸಿದ್ಧಮಾದುದೀ ಕೃತಿ' ಎಂಬ ಭಾಗದಲ್ಲಿ ಇದೇ ಲಕ್ಷ್ಮೀಧರರಾಜನನ್ನೂ ಸ್ತೋತ್ರಮಾಡಿದ್ದಾನೆ. ಇವನು ಕಿಳಕಿಳದುರ್ಗಕ್ಕೆ ಅಧಿಪತಿಯಾದ ಗಂಗರಾದಿತ್ಯ ಶ್ರೀಭೂಷಣ ಇತ್ಯಾದಿ ಬಿರುದಾಂಕಿತನಾದ ಗೋಪಣ ಅಥವಾ ಗೋವರ್ಧನನೆಂಬುವನ ಎರಡನೆಯ ಮಗ. ಈತನ ಹೆಂಡತಿ ಚಂದಲದೇವಿ. ಕರ್ಣಪಾರ್ಯನ ಕಾಲದಲ್ಲಿ ಲಕ್ಷ್ಮೀಧರನು ಯುವರಾಜನಾಗಿದ್ದಿರಬೇಕು, ಅಲ್ಲದೆ ನೇಮಿಚಂದ್ರನು ತನ್ನ ನೇಮಿನಾಥ ಪುರಾಣವನ್ನು 'ಶ್ರೀಮತ್ಪ್ರತಾಪಚಕ್ರವರ್ತಿ' ವೀರಬಲ್ಲಾಳದೇವ ಪ್ರಸಾದಾಸಾಧಿತ ಮಹಾಪ್ರಧಾನ ಸೆಜ್ಜೆವಳ್ಳ ಪದ್ಮನಾಭದೇವಕಾರಿತಂ ಎಂದು ಹೇಳಿಕೊಂಡಿದ್ದಾನೆ. ವೀರಬಲ್ಲಾಳನು ೧೧೭೩ರಿಂದ ೧೨೨೦

ರವರಿಗೆ ಆಳಿದನು. ಇವನ ಮಂತ್ರಿಯು ಕಾಲವೂ ಅದೇ. ಡಾ|| ವೆಂಕಟಸುಬ್ಬಯ್ಯನವರ ಪ್ರಕಾರ ಸೌಂದತ್ತಿಯ ರಟ್ಟವಂಶಕ್ಕೆ ಸೇರಿದ ಇಬ್ಬರು ಲಕ್ಷ್ಮಣರಾಜರ ಹೆಸರು ಇತಿಹಾಸದಲ್ಲಿ ಪ್ರಸಿದ್ಧವಾಗಿದೆ. ಇವರಿಬ್ಬರೂ ವೀರಬಲ್ಲಾಳನ ಸಮಕಾಲೀನರು. ಮೊದಲನೆಯವನು ೧೧೯೯ರಲ್ಲಿಯೂ ಎರಡನೆಯವನು ೧೨೨೮ರಲ್ಲಿಯೂ ರಾಜ್ಯವಾಳುತ್ತಿದ್ದರೆಂದು ಖಚಿತವಾಗಿದೆ. ಮೊದಲನೆಯವನ ಹೆಂಡತಿ ಚಂದಲದೇವಿಯಾದುದರಿಂದ ಅವನ ಆಶ್ರಯದಲ್ಲಿಯೇ ಅಂದರೆ ಸುಮಾರು ೧೧೯೦ಕ್ಕೆ ಮುಂಚೆ ಲೀಲಾವತಿಯನ್ನೂ ಆಮೇಲೆ ವೀರಬಲ್ಲಾಳನು ಚಕ್ರವರ್ತಿಯಾದಮೇಲೆ ನೇಮಿನಾಥ ಪುರಾಣವನ್ನೂ ರಚಿಸಿರುವಂತೆ ಊಹಿಸಬಹುದು. ಪದ್ಮನಾಭನನ್ನು ಪ್ರತ್ಯಕ್ಷ ತೀರ್ಥೇಶ್ವರ ಎಂದು ಶ್ಲೇಷೆಯಿಂದ ಹೊಗಳಿದ್ದಾನೆ.

ನೇಮಿಚಂದ್ರನು ಚತುರ್ಭಾಷಾ ಪಂಡಿತ. ಅವನು ಕನ್ನಡ ಕವಿಗಳಲ್ಲಿ ಯಾರನ್ನೂ ಸ್ಮರಿಸಿಲ್ಲ. ಬಹುಶಃ ಅವರಾರೂ ಅವನ ಸ್ತೋತ್ರಕ್ಕೆ ಪಾತ್ರರಲ್ಲವೆಂದು ಅವನಿಗೆ ತೋರಿತೊ ಏನೊ! ಪ್ರಾಚೀನರಲ್ಲಿ ಸಮಂತಭದ್ರಸ್ವಾಮಿಯ ಸಮವಿಷಮ ಕವಿತೆಯೂ ಅಕಲಂಕನ ವಿದ್ಯಾಮಹಿಮೆಯೂ ಪೂಜ್ಯಪಾದ ಸ್ವಾಮಿಯ ವಾಣೀವಿಲಾಸವೂ ತನಗೆ ಅಭಿಮತವೆಂದು ಹೇಳಿಕೊಂಡಿದ್ದಾನೆ. ಈತನ ಬಿರುದುಗಳು ಅಸಾಧಾರಣವಾದುವು. ವಿದಗ್ಧವಿದ್ಯಾಧರ, ಅಖಿಲಕಲಾಕೋವಿದ, ಉಚಿತ ಸಬುಧ ವಿದ್ಯಾಸದನ, ಕವಿಚಕ್ರವರ್ತಿ, ಭುವನಾಭರಣ, ಸುಕರಕವಿ-ಶೇಖರ, ತಾರ್ಕಿಕತಿಲಕ, ಮಾನಮೇರು, ಜಿನಶಾಸನದೀಪಕ, ಅಕಳಂಕ, ಭಾವುಕಮುಕುರ, ಕವಿರಾಜಮಲ್ಲ, ಅಪ್ರತಿಮಲ್ಲ, ಕಲಾಕಾಂತ, ಕವಿಧವಳ, ಶೃಂಗಾರಕಾರಾಗೃಹ, ಕವಿರಾಜ

ಕುಂಜರ, ಸಾಹಿತ್ಯವಿದ್ಯಾಧರ, ವಿದ್ಯಾವಧೂವಲ್ಲಭ, ಸುಕವಿಕಂಠಾಭರಣ, ವಿಶ್ವವಿದ್ಯಾವಿನೋದ, ಭಾರತೀಚಿತ್ರಚೋರ, ಕೃತಿಕುಲದೀಪ, ವಾಗ್ವಲ್ಲಿಕೀವೈಣಿಕ ಮೊದಲಾದವು ಅವುಗಳಲ್ಲಿ ಕೆಲವು. ಇವುಗಳೆಲ್ಲವೂ ಕವಿಯಿಂದ ಸ್ವಾರೋಪಿತವಾದುವೋ ಇತರರಿಂದ ಕೊಡಲ್ಪಟ್ಟವೋ ಹೇಳುವುದಕ್ಕಾಗುವುದಿಲ್ಲ.

ಸತ್ಕವಿಗಳ ಅಸಾಧಾರಣಶಕ್ತಿಯ ವಿಷಯದಲ್ಲಿ ಆತನಿಗಿದ್ದ ಅಭಿಪ್ರಾಯ ಅನೋಘವಾದುದು. ಅವರು ಅಘಟನಘಟನಾಸಾಮರ್ಥ್ಯವುಳ್ಳವರೆಂಬುದು ಅವನ ಮತ.

ದಿಟ್ಟಿಗೆ ಬಂದ ಕೋಮಳಗುಣಂ [1]ಗೆಡೆಗೊಂಡಿರೆ[1], ಪೂವಿನಂತಿರಾ
ಯ್ದಿಟ್ಟ ಪದಂ, [2]ಬೆಡಂಗೆನಿಸೆ[2] [3]ಬಣ್ಣಸರಂ[3] ಪೊಸತಾಗೆ ನುಣ್ಪು+ಒಡಂ
ಬಟ್ಟಿರೆ ಬಂಧಂ+ಒಂದೆ ಚತುರಾಳಿ ಕರಂ ಬಸವಾಗೆ ಬಾಸಿಗಂ
ಗಟ್ಟುವನಂತೆ ಕಟ್ಟುವುದು ಕಬ್ಬಮನುಬ್ಬಣವಾಗೆ ಕಬ್ಬಿಗಂ.

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ, ವಾಮನಕ್ರಮಂ
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ, ಹರನಂ ನರನೊತ್ತಿ ಗಂಟಲಂ
ಮೆಟ್ಟುಗೆ ಮೆಟ್ಟದಿರ್ಕೆ, ಕವಿಗಳ ಕೃತಿಬಂಧದೊಳಲ್ತೆ ಕಟ್ಟಿದರ್

---

1 ಹೊಂದಿಕೊಂಡಿರಲು. 2 ಮನೋಹರವಾಗಿರಲು. 3 ಅಕ್ಷರಸಮೂಹ.

ಮುಟ್ಟಿದರೊತ್ತಿಮೆಟ್ಟಿದರದೇನಳವಗ್ಗಳಮೋ ಕವೀಂದ್ರರಾ
[1]ಮರನೀಗುಂ [2]ಮಣಿ[2]ಯೀಗುಂ+ಒಂದು [3]ಪಶುವೀಗುಂ
ಕೇಳಿಮೆ[4]ಂದೋಳಿಯೊಳ್
ಪುರುಡಂ ಪುಟ್ಟಿಸಿ ಕಾವ್ಯಮುಂ ಕೊನರಿಪರ್, ಕಲ್ಲಲ್ಲಿ
ನಾರೆತ್ತುವರ್
[5]ಮರುಳಂ ಪೋ [6]ಪುರುಳಾಗಿಪರ್, ಕಿವಿಗಳೊಳ್
[7]ಪೀಯೂಷಮುಂ ಪಿಂಡಲ್+[8] ಉ
ರ್ವರೆಯೊಳ್ ಸಂದ ಕವಿ [9]ಪ್ರವೇಕರ ವಲಂ ಬಲ್ಲರ್
ಪೆಱರ್ ಬಲ್ಲರೆ? ||
ಕಮಳಕ್ಕಾವಗಮಲ್ತು ಲಕ್ಷ್ಮಿಯಿರವು+[10]ಆಸ್ಯಾಬ್ಜಕ್ಕ
ಮುಂಟು+ಅಗ್ಗದ+ಇಂ
[11]ಪಮರ್ದಿಂಗೆ+[12] ಒಚ್ಚತ ಮಲ್ತು ಮತ್ತಿವರ
[13]ವಾಕ್ಪೀಯೂಷ ಪೂರಕ್ಕಮುಂ
ಟಮರರ್ಗರ್ಪಿತಮಲ್ತು ಸೌಖ್ಯಮಿವರೀ ಸಂಸೇವ್ಯ
ಕಾವ್ಯಂಗಳಂ
ಸಮಸಂದಾಲಿಸುವರ್ಗಮುಂಟೆನಿಪರೀಗೆ+ಒಳ್ಪಂ
ಕವೀಂದ್ರೋತ್ತಮರ್
[14]ಕುವಳಯದಲರಂ, [15]ಕೌಮುದಿ
ಯ ವಿಭವಮುಂ ಕಂಡು ಕೊಂಡು ಕೊನೆವಂ ಕವಿಯೊ

---

1 ಕಲ್ಪವೃಕ್ಷ. 2 ಚಿಂತಾಮಣಿ. 3 ಕಾಮಧೇನು. 4 ಸಮೂಹ. 5 ದಡ್ಡ, ಹುಚ್ಚ. 6 ಸತ್ವಶಾಲಿ. 7 ಅಮೃತ. 8 ಭೂಮಿ. 8 ಶ್ರೇಷ್ಠ. 10 ಮುಖಕಮಲ. 11 ಅಮೃತಕ್ಕೆ. 12 ಸಮನ್ವಯ. 13 ಮಾತೆಂಬ ಅಮೃತ. 14 ಕನ್ನೈದಿಲೆಯ ಹೂವು. 15 ಬೆಳುದಿಂಗಳು.

ರವಿಯೊ, ರವಿ ಕಾಣದುದಂ
ಕವಿ ಕಾಣ್ಬನೆನಿಪ್ಪ ವಚನಮೇಂ ತಪ್ಪುಗುಮೇ

ಎಂದು ಸವಾಲ್ ಹಾಕುವನು.

ಶ್ರಿಯನೊಲಿಸುವೊಡೆ, ತಾಂ ಕವಿ
ನಾಯಕನೆನಿಸುವೊಡೆ, ತನ್ನ ಕೃತಿ ಕಲ್ಪಾಂತ
ಸ್ಥಾಯಿಯೆನಿಸುವೊಡೆ, ಬಲ್ಲರ
ಬಾಯಂ ಪೊಕ್ಕೋದಿ ಕಲ್ಗೆ ಕವಿ ಸಕಲಮುಮಂ

ಎಂದು ಬುದ್ಧಿವಾದ ಹೇಳುವನು. ಕವಿತ್ವದ ವಿಷಯದಲ್ಲಿ ಅವನಿಗಿದ್ದ ಪೂಜ್ಯಭಾವನೆಯಂತೂ ಅನ್ಯಾದೃಶವಾದುದು.

[1]ಕಡುಕಂಪಂ ಪಿಡಿಕಯ್ಯಲಕ್ಕುಮೆ, ಬಟಲ್ದೈತಂದ ತಂಗಾಳಿಯಂ
ಪಿಡಿಯಲ್ ಬರ್ಕುಮೆ, [2]ತೃಷೆಗೊರ್ಕುಡಿತೆಯಿಂ ಕೊಂಡಚ್ಚವೆಳ್ದಿಂಗಳಂ
ಕುಡಿಯಲ್ ಬರ್ಕುಮೆ, ಕೂರ್ತಿತೆಂದು ತರುಣೀ ಸಂಭೋಗ ಸೌಖ್ಯಂಗಳಂ
ನುಡಿಯಲ್ ಬರ್ಕುಮೆ, ಬಾರದು+ಇಂತುಟಿವಲಂ ಕಾವ್ಯಾಮೃತಾಸ್ವಾದನಂ

ಬೆಲೆಯಿಂದಕ್ಕುಮೆ ಕೃತಿ ಗಾ
ವಿಲ ಭುವನದ ಭಾಗ್ಯದಿಂದಮಕ್ಕುಂ ನೋಟ್ಪಂ
ಬೆಲೆಗೊಟ್ಟು ತಾರ [3] ಮಧುವಂ
[4]ಮಲಯಾನಿಲನಂ ಮನೋಜನಂ ಕೌಮುದಿಯಂ

---

[1] ತೀವ್ರವಾದ ವಾಸನೆ. [2] ಬಾಯಾರಿಕೆ. [3] ವಸಂತ.
[4] ಮಲಯ ಪರ್ವತದ ಗಾಳಿ.

ಕವಿ ಕಾಂಚನ [1]ಕಣಿಕೆಗೆ[1] ಮಾ
ಱುವನೇಕೆಯೊ ಮರುಳನ್+[2]ಅಳಿಗೆ ಮಾಣಿಕಮಂ ಮಾ
ಱುವ ತೆಱದಿನೀ ಚತುರ್ದಶ
ಭುವನಮೆ ಬೆಲೆಯೆನಿಪ ಕೃತಿಯನಮಳಾಕೃತಿಯಂ ||
ಎಣಿಸದೆ ಗುಣಮಂ ಗಾಜಿಗೆ
ಮಣಿಯಂ ಮಾಱುವ ವೊಲಹಹ ನಿನಗಂ ತನಗಂ
ಪಣಕೆ ಕೃತಿಯೆಂಬ ಚಿಂತಾ
ಮಣಿಯಂ ಮಾಱುವನ ಬುದ್ಧಿಗಾಂ ಬೆಱಗಾದೆಂ ||
ನಿಧಿ ದೊರೆಕೊಂಡೊಡಂ [3]ಬರವಿ[3]ಗಂಜುವರೇ ವಿಗೆ
ಮುಗ್ಧರುಂ [4]ಸುಧಾಂ
ಬುಧಿ[4] ದೊರೆಕೊಂಡೊಡೇನೊಱೆವುದೋಡುವುರೇ
ಸಕಲಾರ್ಥ ಸಂಭವಾ
ವಧಿ ಜಿನರಾಜ ರಾಜಿತ ಕಥಾಕಥನಂ ದೊರೆಕೊಂಡೊಡಂ ಪಣ
ಕ್ಕದ ಮರನಣ್ಣ ಬಣ್ಣಿಪರೆ ಚಾರು ವಿಚಾರಪರರ್ ಕವೀಶ್ವರರ್ ||

ಎಂದು ವಿಚಾರಪರನಾಗುವನು. ತಾನು ಚತುರ್ಭಾಷಾ ಪಂಡಿತನೂ ಸತ್ಯವಿಮಾರ್ಗದಲ್ಲಿ ಒಳಪೊಕ್ಕು ಸಾರಗ್ರಹಣ ಮಾಡಿದವನೂ ಆದುದರಿಂದ ತನ್ನ ಕೃತಿಗಳ ವಿಷಯದಲ್ಲಿಯೂ ತನ್ನ ಶಕ್ತಿಸಾಮರ್ಥ್ಯಗಳ ವಿಷಯದಲ್ಲಿಯೂ ಆತನ ಅಭಿಮಾನ ಬಲು ಹಿರಿದು.

ಪಿರಿದನುರಾಗದಿಂದೋದುವರ ನಾಲಗೆಗಳ್ಗೆ+ಅ
ಮರ್ದಾದುದು+ಒಲ್ದು ಕೇ

---

1 ಕಾಸು, ನಾಣ್ಯ. 2 ಮುಚ್ಚಿಗೆ. 3 ಕ್ಷಾಮ. 4 ಅಮೃತ, ಸಮುದ್ರ.

ಲ್ವರ ಕಿವಿಗಳ್ಗೆ ಮಾಣಿಕದ ಮಂಜರಿಯಾದುದು
ಭಾವಿಸುತ್ತಮಿ
ರ್ಪರ ಬಗೆಗಳ್ಗೆ ಪೊಚ್ಚ [1]ಪೊಸವೇಟದ[5] ಪೆಣ್ಣವೊಲಾದುದು+
ಇಂಪಿನಿಂ
ಸುರುಚಿರ ಕಾಂತಿಯಿಂ ಸೊಬಗಿನಿಂದೆಸೆವೀ ಕೃತಿ
ನೇಮಿಚಂದ್ರನಾ ||

ಸಾತಿಶಯಾರ್ಥಮುಮಂ ನ,
ಲ್ವಾತುಮನೊಪ್ಪಿಸಿದರ್+ಒಸೆದು ತಮಗಿಲ್ಲದುದಂ
ಖ್ಯಾತಂಗೆ ಸುಕವಿ ನೇಮಿಗೆ
ಭೂರಿಭವದ್ಭಾವಿ ಕವಿಗಳೇನೊಳ್ಳಿದರೋ ?
ಯುವತಿ ಸರಸತಿ ಪುರಾತನ
ಕವಿರಮಣನನಱಿದಳಿಲ್ಲ ನಿರ್ಮಳ[2] ದಶನ
ಚ್ಛವಿ ಕುಸುಮಿತ ರಸನಾಪ
ಲ್ಲವತಲ್ಪ[2]ದೊಳಿರ್ದು ಸುಕರಕವಿಶೇಖರನಾ |
ಚತುರರೆರ್ದೆಯಿಂದ ಮಿಟೀಯಳ್
ಸ್ತುತಿಯಿಂ ನಾಲಗೆಯನಗಲಳೆಂದುಂ ತನ್ನೀ
ಕೃತಿಕಾಂತೆ ನಿಜಕಳಾಕುಶ
ಲತೆಯಿಂ ಮತ್ತೆಂತು ಮೆಱೆವನೋ ಕವಿಧವಳಂ ||

[3]ಓತರ ಗೆಯ್ತ[3]ದಂತೆ ರಸಭಾವನೊಡಂಬಡೆ [4]ನಲ್ಲರ[4]ಶ್ಟಿದೊ
ಳ್ಮಾತುಗಳಂತೆ ಮಾತುಗಳೊಳಿಂಪು+ಒಸಱುತ್ತಿರೆ
ಕಾವ್ಯಭೂಷಣಾ

---

[1] ಹೊಸ ಪ್ರೇಮ. [2] ಹಲ್ಲಿನ ಕಾಂತಿಯಿಂದ ಕುಸುಮಿತ (ಬೆಳಗುತ್ತಿರುವ)ವಾದ ನಾಲಗೆಯೆಂಬ ಚಿಗುರಿನ ಹಾಸಿಗೆ. [3] ಪ್ರೀತಿಪಾತ್ರರಾದವರ ಕಾರ್ಯ. [4] ಪ್ರಿಯರು.

ರ್ಥಾತಿಶಯಂ ಪ್ರಿಯರ್ ತುಡಿಸಿದರ್ಥವಿಭೂಷಣದಂತಿ
ರೊಪ್ಪೆಪೇ
ೞ್ದಾತನದಾರೊ ನಾನಱಿಯೆನೆಂತಿನಿಯಂ ರತಿರಾಗದೋಹಳಂ
ಇನ್ನು ಕವಿವ್ರಜಂ ಪಡೆಯಲೀ ಪೊಸದೇಸೆಯನೀ ಸದರ್ಥಮಂ
ಮುನ್ನಿನ ಸತ್ಕವೀಶ್ವರರ್ಗಮೇಂ ದೊರೆಕೊಂಡುದೆ ಕೂಡೆ
ಬಿನ್ನಣಂ
ಸನ್ನಿದ [1]ಮಾದುದಕ್ಕರದ[1]ಮರ್ಕೆಯಿನೀ ಕೃತಿಯಂ
ಕೃತಾರ್ಥನೊ
[2]ಳ್ದಿನ್ನನೊ ಪೇೞ್ದನೇನಱಿಯ ನಮ್ಮರಸಂ ಕವಿರಾಜಕುಂಜರಂ

ಈಯಂದದಿನತಿಚತುರ
ಸ್ತ್ರೀಯರುಮತಿಚತುರ ಕವಿಗಳುಂ ಕೇಳ್ದೊಲವಿಂ
ಬಾಯಂಬಿಡುತಿರೆ ಕರ್ಣರ
ಸಾಯನಮೆನೆ ಪೇೞ್ವಿನೆಸೆಯೆ ಲೀಲಾವತಿಯಂ

ಇದು ಲೀಲಾವತಿಯ ರಚನೆಗೆ ಪ್ರೇರಣೆ ದೊರಕಿದ ವಿಷಯ. ನೇಮಿನಾಥ ಪುರಾಣಕ್ಕಂತು ಇನ್ನೂ ಮಿಗಿಲಾದ ಪ್ರಚೋದನೆಯುಂಟಾಯಿತಂತೆ.

ನವರಸಪೂರ್ಣದೊಳ್ ಲಲಿತಬಿಂಬಿತಸರ್ವಪದಾರ್ಥದೊಳ್
ಮಹಾ
ಕವಿಕುಲ ಸೇವ್ಯದೊಳ್ ಲಸದಳಂಕೃತಿ [3]ಕಂಜನಿವಾಸ[3]ದೊಳ್
ಜನೋ

[1] ಸೇರುವಿಕೆ, ಹೊಂದಾಣಿಕೆ. [2] ಎಂತಹವನೊ. [3] ಸರೋವರ.

ತ್ಸವಕರದೊಳ್ ಸರಸ್ವತಿ ಮನೋಮುದದಿಂ ಜಲಕೇಳಿ
ಯಾಡುವಳ್
ಪ್ರವಿಮಳ [1]ನವ್ಯಕಾವ್ಯಕಮಳಾಕರ[1]ದೊಳ್ ಕವಿರಾಜ
ಮಲ್ಲನಾ ||

ಧರೆ ಲೇಸೆಂಬಾಸೆಗಾಱಂ ಪರಪುರುಷಗುಣಾನ್ವೇಷದೊಳ್
[2]ಸೈಪುಗಾಱಂ[2]
ಸಿರಿಯೊಳ್ ಕಟ್ಟ[3]ಣ್ಮುಕಾಱಂ[3] ವಿತತ ವಿತರಣೋತ್ಸಾಹ
ದೊಳ್ [4]ಗೆಲ್ಲಕಾಱಂ
ಪರವಾದಿವ್ರಾತದೊಳ್ ಬಿತ್ತರಿಪ [5]ತುರಿಪಕಾಱಂ[5] ಮಹಾ
ಧರ್ಮದೊಳ್ [6]ಮ
ಚ್ಚರಕಾಱಂ[6] ಭಾವಕೋತ್ಪಾದಕ ರಸಿಕಕವಿಸ್ತೋಮದೊಳ್
ನೇಮಿಚಂದ್ರಂ ||

ರುಚಿರಕಲಾಧರನಿಂ ನೇ
ಮಿಚಂದ್ರನಿಂ ಸತ್ಕವೀಶಚೂಡಾಮಣಿಯಿಂ
ಶುಚಿಪದ [7]ಶಶಿಕಾಂತೋಪಲ[7]
ನಿಚಯಂ [8]ರಸಮೊಸರುತಿರ್ಪುವೇನ[8]ಚ್ಚರಿಯೋ
ರಸಮೊ ರಸಾಯನಮೋ ಶ್ರುತಿ
ವಸಂತಮೊ ಕಿವಿಗಳಮೃತಮೋ ನೇಮಿಯ ವಾಕ್
ಪ್ರಸರಮುದದೆಸಕದಿಂ [9]ನಿ
ಪ್ಪೊಸತಾ[9]ದುದು ಜಗಕ್ಕೆ ನೇಮಿನಾಥ ಪುರಾಣಂ

---

[1] ಹೊಸ ಕಾವ್ಯವೆಂಬ ಸರೋವರ. [2] ಅದೃಷ್ಟಶಾಲಿ. [3] ಪರಾಕ್ರಮಿ. [4] ಜಯಶಾಲಿ. ಆತುರವುಳ್ಳವನು. [5] ಸ್ಪರ್ಧೆಯುಳ್ಳವನು. [7] ಚಂದ್ರಕಾಂತಶಿಲೆ. [8] ರಸವನ್ನು ಸ್ರವಿಸುತ್ತಿರುವುದು. [9] ಬಹು ಹೊಸದು,

ಎಂದು ಗುರುಜನವು ಪರಸಿ ಹೊಗಳಲಾಗಿ ನೇಮಿನಾಥ ಪುರಾಣವನ್ನು ರಚಿಸಿದನಂತೆ. ಈ ಹೊಗಳಿಕೆಯ ವಾಸ್ತ ವಾಂಶವನ್ನು ಮುಂದೆ ಆತನ ಕಾವ್ಯ ಪರಿಚಯವಾದಮೇಲೆ ವಿಮರ್ಶಿಸತಕ್ಕ ವಿಷಯ.

## ಲೀಲಾವತಿ

ಮೊದಲೇ ತಿಳಿಸಿರುವಂತೆ 'ಲೀಲಾವತಿ' ನೇಮಿಚಂದ್ರನ ಪ್ರಥಮಕೃತಿ. ಇದೊಂದು ಲೌಕಿಕಕಾವ್ಯ. ಶೃಂಗಾರರಸಪ್ರಧಾನ ವಾದ ಒಂದು ಕಟ್ಟುಕತೆ. ಇಂತಹ ಕೃತಿಗಳು ಕನ್ನಡದಲ್ಲಿಯಾ ಗಲಿ ಅದಕ್ಕೆ ಆಕರವೂ ಪ್ರೇರಕವೂ ಆದ ಸಂಸ್ಕೃತ ಭಾಷೆಯಲ್ಲಿ ಯಾಗಲಿ ಹೆಚ್ಚಿನ ಸಂಖ್ಯೆಯಲ್ಲಿಲ್ಲ. ಬಹುಕಾಲದವರೆಗೆ ಕನ್ನಡ ಸಾಹಿತ್ಯದ ಧಾರ್ಮಿಕ ಕ್ಷೇತ್ರದಲ್ಲಾಗಲಿ ಲೌಕಿಕ ಕ್ಷೇತ್ರದಲ್ಲಾ ಗಲಿ ಶೃಂಗಾರರಸಕ್ಕೆ ಐಹಿಕಾಮುಷ್ಮಿಕ ದೃಷ್ಟಿಯಿಂದ ಪರಮೋ ಚ್ಚಸ್ಥಾನವೇನೂ ಲಭಿಸಿರಲಿಲ್ಲವೆಂದು ಕಾಣುತ್ತದೆ. ಆದುದ ರಿಂದಲೇ ಪೂರ್ಣವಾಗಿ ಶೃಂಗಾರರಸಮಯವಾದ ಪ್ರತ್ಯೇಕ ಗ್ರಂಥ ಕನ್ನಡದಲ್ಲಿ ಹೇರಳವಾಗಿಲ್ಲದಿರಬಹುದು. ಈ ಶಾಖೆ ಯಲ್ಲಿ ಹಿಂದಿನ ಸಂಪ್ರದಾಯವನ್ನೂ ಸ್ವಲ್ಪ ಒತ್ತಿಗಿಟ್ಟು ಕನ್ನಡ ದಲ್ಲಿಯೂ ಮೊದಲು ಕತೆಯನ್ನು ರಚಿಸಿದವನು ಒಂದನೆಯ ನಾಗವರ್ಮ. ಈತನು ಹತ್ತನೆಯ ಶತಮಾನದ ಅಂತ್ಯಭಾಗ ದಲ್ಲಿ ಸಂಸ್ಕೃತ ಗದ್ಯರೂಪದಲ್ಲಿದ್ದ ಬಾಣನ ಕಾದಂಬರಿಯನ್ನು ಕನ್ನಡ ಚಂಪೂರೀತಿಯಲ್ಲಿ ಬಹಳ ಯಶಸ್ವಿಯಾಗಿ ರಚಿಸಿದನು. ಇವನ ದಾರಿಯನ್ನೇ ಹಿಡಿದು ನೇಮಿಚಂದ್ರನು ತನ್ನ ಲೀಲಾವತಿ ಯೆಂಬ ಕಥೆಯನ್ನು ಕನ್ನಡ ಚಂಪೂಮಾರ್ಗದಲ್ಲಿ ಬರೆದಿದ್ದಾನೆ.

ಲೀಲಾವತಿಯ ರಚನೆಯಲ್ಲಿ ಕವಿಯೇ ತನ್ನ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾನೆ.

ಸ್ತ್ರೀರೂಪವೆ ರೂಪಂ ಶೃಂ
ಗಾರವೆ ರಸಂ+ಅತುಳ ಸುರತ ಗಂಧವೆ ಗಂಧಂ
ಸಾರಸ್ಪರ್ಶಂ ಗುರುಕುಚ
ಭಾರಸ್ಪರ್ಶಂ ಗಳಪ್ರಶಬ್ದವೆ ಶಬ್ದಂ

ಎಂಬ 'ಉನ್ನತಾದರ್ಶ'ವನ್ನು ಹೊಂದಿ 'ಶೃಂಗಾರವಂ ಕಾವ್ಯಬಂಧನದೊಳ್ ಸೆಱ[3]ಗೆಯ್ದು ಮೆಯ್ಮೆ ತನ್ನದು' ಎಂದು ಹೊಗಳಿಕೊಂಡು ಅದಕ್ಕನುಗುಣವಾಗಿಯೆ '[1]ಅಂಗಭವ[1]ನಂ ಭವಸಾರನನ್ [2]ಆರ್ದು[2] ಸುಟ್ಟ ಭೂತೇಶನ ಬುದ್ಧಿಗುದ್ದವಱಿದಾಂ ಪೊಗೞೆಂ; ಪೊಗೞ್ವೆಂ ಮನೋಜನಂ [3]ಕೇಸುರಿ[3]ಯಂತುರ್ಬಿ....ಕಾಸಿ [4]ಕಪಾಲಿ[4]ಯಂ ಪಿಡಿದೊಱ[5]ಲ್ದರೆವೆಣ್ಣ[5]ನೆ ಮಾಡಿಬಿಟ್ಟನಂ' ಎಂದು ಮನ್ಮಥ ಪ್ರಾರ್ಥನೆಯಿಂದಲೆ ಕಥೆಯನ್ನು ಪ್ರಾರಂಭಿಸುವನು. ಮಹಾಕಾವ್ಯಸಹಜವಾದ ಅಷ್ಟಾದಶವರ್ಣನೆಗಳನ್ನು ಬಿಟ್ಟರೆ ಕಥಾಸೂತ್ರವನ್ನು ಮುಂದಿನ ರೀತಿಯಲ್ಲಿ ಸಂಗ್ರಹಿಸಬಹುದು.

ಭೂಮಂಡಲದಲ್ಲಿ ಪ್ರಖ್ಯಾತವಾದ ಜಯಂತೀಪುರವೆಂಬ ಪಟ್ಟಣದಲ್ಲಿ ಚೂಡಾಮಣಿಯೆಂಬ ರಾಜನಿದ್ದನು. ಆತನ ಹೆಂಡತಿ ಪದ್ಮಾವತಿ. ಅವರಿಬ್ಬರಿಗೂ ಕಂದರ್ಪದೇವನೆಂಬ ಕುಮಾರನು ಜನಿಸಿದನು. ಅವನ ರೂಪು ಪರಮಮೋಹಕವಾದುದು.

---

1 ಮನ್ಮಥ. 2 ಅರ್ಭಟಮಾಡಿ. 3 ಕೆಂಪಿನ ಉರಿ. 4 ಈಶ್ವರ.
5 ಅರ್ಧ ಹೆಂಗಸು, ಅರ್ಧನಾರೀಶ್ವರ.

ಸಿಡುಗಣ್ ಪದ್ಮದಳೋಪಮಂ ಸ್ಮಿತಮುಖಂ
ಚಂದ್ರೋಪಮಂ ತೋಳ್ಗಳ
ಪ್ಪೊಡೆ [1]ದಿಙ್ನಾಗಕರೋ[1]ಪಮಂಗಳ್+ಉರಮುಂ ಶ್ರೀರತ್ನ
ಪೀಠೋಪಮಂ
ಪೊಡೆ ರಂಭಾಲಲಿತೋಪಮಂ ಪದಯುಗಂ [2]ಕೂರ್ಮೋ[2]ಪಮಂ
ತಾನದಾ
ದೊಡಮೇಂ ರೂಪು ವಿಚಾರಿಪಂದನುಪಮಂ
ಶ್ರೀರೂಪಕಂದರ್ಪನಾ ||
ಲಲನೆಯುರಾತನಂ ಬಯಸಿ ನೋಡಲೊಡಂ
ಮದನಾಗ್ನಿದಾಹಮ
ಗ್ಗಳಿಸದೆ ಮಾಣದೆಂದು ಕೃಪೆಯಿಂ ಪಡೆದಂ ಬಿದಿ
ಚಂದ್ರಬಿಂಬಮಂ
[3]ಮಳಯಜ[3]ಮಂ [4]ಮೃಣಾಳ[4]ಕುಳಮಂ ಕೊಳನಂ
[5]ಲತಿಕಾಗೃಹಂ[5]ಗಳಂ
[6]ತಳಿರ್ಗ[6]ಳನೆಂದೊಡಂದಮನದೇವೊಗಟ್ಸಿಂ ಕವಿತಾ
ವಿಲಾಸನಾ ||
ಜನತಾನಂದೈಕನೇತ್ರಂ ಪ್ರಿಯಮಧುಸಮಯಂ
ರೂಪಕಂದರ್ಪದೇವಂ
ಮುನಿಸಿಂ ಚಾಪಕ್ಕೆ ಕೈನೀಡಿದೊಡೆ ನಡುಗುವರ್
ಪೊಕ್ಕು ನೀರೊಳ್ ಪೊರಟ್ವರ್

---

[1] ದಿಗ್ಗಜಗಳ ಸೊಂಡಿಲು. [2] ಆಮೆ. [3] ಶ್ರೀಗಂಧ. [4] ತಾವರೆಯ ದಂಟು. [5] ಬಳ್ಳಿಮನೆ. [6] ಚಿಗುರು.

ವನವಂ ಸಾರ್ದಿರ್ಪರೆಂದುಂ ತಳಿರನುಡುವರ್
ಅಂಭೋಜಮಂ ಪಾಸುವರ್ ಬೆ
ಚ್ಚನೆ ಸುಯ್ವರ್ [1]ಪ್ರಾಜ್ಯರಾಜ್ಯಾಂಗನೆ[1]ಯ ವಿರಹದಿಂ
[2]ವೈರಿವೀರಾವನೀಶರ್[2] ||

ಇಂತಹ ರಾಜಕುಮಾರನು ಯೌವನ ಪ್ರಾದುರ್ಭಾವದಲ್ಲಿ ಯುವರಾಜ ಪದವಿಯನ್ನು ಪಡೆದು ಒಂದು ದಿನ "ಚಂದ್ರೋದಯದೊಳ್ [3]ಪುರಪುರಂಧ್ರೀಜನ[3]ದ ಚಂದ್ರಿಕಾಮಹೋತ್ಸವಮಂ ನೋಡಲುತ್ಸುಕನಾದ ನಾಗರಿಕ ವಿಟವಿದೂಷಕ ಪೀಠಕರುಮತಿಚತುರನಪ್ಪಮಕರಂದನುಂ ಬೆರಸು ಅರಮನೆಯಂ ಪೊಱಮಟ್ಟು ವೇಶ್ಯಾವಾಟಮಂ ಮುಟ್ಟಿವಂದು ಅಂತಪ್ಪಾರಾತ್ರಿ ಸಂಭೋಗಮನತಿ ಮುದದಿಂ ನೋಡಿಯುಂ ನಿರ್ವಿಕಾರಸ್ವಾಂತಂ" ರಾಜಾಲಯಕೆ ತಿರುಗಿ

ಶ್ರೀಪತಿ [4]ಫಣಿಶಯ್ಯೆ[4]ಗೆ ಗಂ
ಗಾ[5]ಪುಳಿನತಳ[5]ಕ್ಕೆ ದಿವಿಜವಾರಣಹಂಸಂ
ಪೋಪಂತೆ ಪೋಗಿ ಕೃತಿಕುಲ
ದೀಪಂ ಪವಡಿಸದನಮಳಶಯ್ಯಾತಳದೊಳ್

ಕುಮಾರನು ನಿದ್ರಾಂಗನಾಸಂಗದಿಂದ ಪರವಶನಾಗಿ ಮಲಗಿರಲು

---

1 ಉತ್ತಮಳಾದ ರಾಜ್ಯಲಕ್ಷ್ಮಿ. 2 ಪರಾಕ್ರಮಶಾಲಿಗಳಾದ ಶತ್ರುರಾಜರು. 3 ಪಟ್ಟಣದ ಸ್ತ್ರೀಯರು. 4 ಹಾವಿನ ಹಾಸಿಗೆ. 5 ಮರಳಿನ ದಿಬ್ಬ.

ಪಿರಿದುಂ ಕಣ್ಣಿಂ ಮುನ್ನಂ
ನೆರೆದುದು ತವಕದೊಳೆ ಚಿತ್ತವೆನೆ ಕನಸಿನೊಳಾ
ದರಿಸಿ ಪದಿನಾಱು ಬರಿಸದ
ಹರೆಯದ ಕನ್ನಿಕೆಯನವನಿಪಾಲಂ ಕಂಡಂ

ಕರುವಿಟ್ಟಂ[1] ಕಾಮದೇವಂ ರತಿಯತಿಶಯದಿಂ
ಬಣ್ಣವಿಟ್ಟಳ್ ಬಸಂತಂ
ಬರೆದಂ ಸರ್ವಾಂಗಮಂ ಕಣ್ದೆಱೆದನೊಸೆದು [2]ಶೀತಾಂಶು[2]
ಚೈತ್ರಾನಿಳಂ ಕೀ
ವಿರೆ [3]ಜೀವಂಬೊಯ್ದ[3]ನಂತಲ್ಲದೊಡೆ ಸೊಗಯಿಪೀ
ರೂಪಮೀ ಬಣ್ಣಮೀ ಮೆ
ಯ್ಸಿರಿಯೀ [4]ಕಣ್ಬೆಲ್ಲ[4]ಮೀ ಭಾವಕಮೊಗೆಯದೆನಲ್ ಕಾಂತೆ
[5]ಕಣ್ಗಿಡ್ಡಮಾದಳ್[5] ||

ಸ್ವಪ್ನವೊಡೆಯಿತು, ಎಚ್ಚರವಾಯಿತು. ಕನ್ಯೆ ಕಾಣದಾದಳು.

ಅಂಗಂಗಳೊಳಡಱಿದಳೊ ಕರ
ಣಂಗಳ್ ತಮ್ಮೊಳಗೆ[6]ಪಚ್ಚುಗೊಂಡವೊ[6] ಚಿತ್ತಂ
ನುಂಗಿದುದೊ ಪೇಱೆನಕ್ಕಟ ಆ
ಗಂಗನೆಯಂ ಕಾಣದರಸನಿದು ಕನಸೆಂದಂ
ಬೆದಱಿದ ಮನಮಂ ಸಂತೈ
ಸಿದನೊಯ್ಯನೆ ವಿಕಳಮಾದ ಸಕಳೇಂದ್ರಿಯಮಂ

---

[1] ಚಿತ್ರಿಸು, ಕೊರೆ, ಲೇಪ್ಯಕರ್ಮ ಮಾಡು. [2] ಚಂದ್ರ. [3] ಪ್ರಾಣವನ್ನು ಹೊಯ್ದ. [4] ಸೌಂದರ್ಯ. [5] ಕಣ್ಣಿಗೆ ಮನೋಹರಳಾದಳು. [6] ಭಾಗಮಾಡಿಕೊಂಡವೊ.

[1]ಪದುಳಿಸಿದಂ[1] [2]ಪಾಡೞಿದ
ಳ್ಕಿದ[2] ತನ್ನನೆ ತಾನೆ ಪೊಸತುಮಾಬ್ಬಪೊಲರಸಂ

ಆದರೂ ವಿರಹವು ಅಸಹನೀಯವಾಯಿತು.

[3]ಪೆಱತು[3] ನುಡಿ ಪೆಱತು ಭಾವನೆ
ಪೆಱತೆಸಕಂ ಪುಗದು ತರುಣಿ [4]ತೀವಿದ[4] ಮನದೊಳ್
ಪೆಱತೇಂ ತನ್ನ ಮನಂದೇಂ
ಮಱೆದನೊ ಪರವಶತೆಯಿಂದ ವಿತರಣಮುಗ್ಧಂ

ಹೀಗಿರುವವನನ್ನು ಸ್ನೇಹಿತನಾದ ಮಕರಂದನು ಮೂರನೆಯ ದಿನ ಕಂಡು

[5]ಮನದನ್ನ[5]ನೆನಿಸುವೆನ್ನೊಳ
[6]ಳಿನಿತುವರಂ[6] ನಾಣ್ಚಲೇಕೆ ಮಿಥ್ಯಾಮೋಹ
ಕ್ಕಿನಿನಿರಿದು ವಿಕಳನಪ್ಪುದೆ
ಕನಸಿನ ಬತ್ತಕ್ಕೆ [7]ಗೋಣಿಯಾಂಪರೆ[7] ನೃಪತಿ

ಎಂದು ಎಷ್ಟು ಸಮಾಧಾನ ಮಾಡಿದರೂ ಪ್ರಯೋಜನವಾಗದೆ ನೋಯುತ್ತಿರಲು ಒಂದು ದಿನ ಪ್ರತಿಹಾರಿಯೊರ್ವಳು ಕಂದರ್ಪ ದೇವನಲ್ಲಿಗೆ ಬಂದು ಅಪೂರ್ವಿಗರಾದ ಇಂದ್ರಜಾಲಿಕನೂ ಜೋಗಿಣಿಯೂ ಬಂದಿರುವರು, ಕುತೂಹಲವಿದ್ದರೆ ಕಾಣ ಬಹುದು ಎನಲು ಅವರನ್ನು ಒಳಹೊಗಿಸೆಂದು ಅರಸನ

---

1 ಸಮಾಧಾನ ಮಾಡಿಕೊಂಡ. 2 ಸ್ವಭಾವ ಸ್ಥಿತಿಯನ್ನುಳಿದು. ಹೆದರಿದ್ದ. 3 ಬೇರೆ. 4 ತುಂಬಿರುವ. 5 ಸ್ನೇಹಿತ. 6 ಇಲ್ಲಿಯವರೆಗೆ. 7 ಗೋಣಿ(ಚೀಲ)ಯನ್ನು ಒಡ್ಡುತ್ತಾರೆಯೆ?

ಕಣ್ಣರಿದ ಮಕರಂದನು ಆಜ್ಞಾಪಿಸಿದನು. ಒಡನೆಯೇ ಮಾಯಾಭುಜಂಗನೂ ಜೋಗಿಣಿಯೂ ಒಳಹೊಕ್ಕು ತಮ್ಮ ಅದ್ಭುತವಾದ ಇಂದ್ರಜಾಲ ವಿದ್ಯೆಯನ್ನು ಪ್ರದರ್ಶಿಸಿದರು. ಸಭೆಯೆಲ್ಲ ಮೆಚ್ಚಿಗೆಯಿಂದ ತಲೆದೂಗುತ್ತಿರಲು ಮಕರಂದನು ಇದಿರಲಿ, 'ಮೂಲೋಕದೊಳ್ ಮೇಲೆನಿಸುವ ವನಿತಾರತ್ನಮಂ ರಾಜವಂಶಾಧಿಕಮಂ ತೋರು' ಎಂದನು. ಹಾಗೆ ಹೇಳುವುದಕ್ಕೆ ಮೊದಲೆ ಮಾಯಾಭುಜಂಗನು ಜೋಗಿಣಿಯ ಮುಖವನ್ನು ನೋಡಲು ತಕ್ಷಣವೇ ಅವಳು ಆಕಾಶ ಪ್ರದೇಶದಲ್ಲಿ ವಿರಹವ್ಯಾಕುಲೆಯಾದ ರಾಜಕುಮಾರನ ಕನಸಿನಲ್ಲಿ ಬಂದ ಕನ್ಯೆಯನ್ನು ತೋರಿಸಿದಳು.

[1]ಬಿಸುಸುಯ್ಯಿಂ[1] ನಸುಗುಂದಿ ಬಾಡಿದಧರಂ ಕಣ್ಣೀರ [2]ಬಾನಲ್ಗಳಿಂ[2]
ಬಸಿವಾಸ್ಯಂ ತಳಗೆಯ್ಯ ಪಚ್ಚೆ [3]ಪಸರಂಗೊಂಡಿರ್ದ[3] ಗಂಡಸ್ಥಳಂ
ಪೊಸವೆಳ್ಪಂ ಮಿಸುಪಂಗಯಷ್ಟಿ ನೊಸಲೊಳ್ ನೀಳ್ದಿರ್ದ [4]ನೀಲಾಳಕಂ[4]
[5]ಪಿಸುಣಾಡಿತ್ತು[5]ಸಮಾಸ್ತ್ರನಸ್ತ್ರ ಹತಿಯಂ [6]ತತ್ಕಾಮಿನೀರೂಪಕಂ

ಇದನ್ನು ನೋಡಿದ ಕಂದರ್ಪದೇವನು ಮೂರ್ಛಾಗತನಾದನು. ಐಂದ್ರಜಾಲಿಕನು ಸನ್ಮಾನಿತನಾಗಿ ಹೊರಟುಹೋದನು. ಎಚ್ಚೆತ್ತ

---

1 ಬಿಸಿಯಾದ ಉಸಿರಿನಿಂದ. 2 ಪ್ರವಾಹಗಳಿಂದ. 3 ಹರಡಿಕೊಂಡಿದ್ದ. 4 ಕರಿಯ ಮುಂಗುರುಳು. 5 ಚಾಡಿ ಹೇಳಿತು. 6 ಆ ಹೆಂಗಸಿನ ರೂಪು.

ರಾಜಕುಮಾರನಿಗೆ ಊರಿನಲ್ಲಿರಲು ಮನಸ್ಸಾಗದೆ ಆ ಕನ್ನಿಕೆಯನ್ನು ಹುಡುಕಿಕೊಂಡು ಮಕರಂದನೊಡನೆ ಹೊರಟು ಪ್ರಕೃತಿ ಸೌಂದರ್ಯಗಳನ್ನು ಆಸ್ವಾದಿಸುತ್ತ ಮುಂದು ಮುಂದೆ ನಡೆಯುತ್ತಿರಲು ಒಂದುಕಡೆ ಕಾಡುಹಂದಿಯನ್ನು ಬೇಟೆಯಾಡುತ್ತಿರುವುದು ಕಣ್ಣಿಗೆ ಬೀಳುವುದು. ಮಕರಂದನೂ ಕಂದರ್ಪದೇವನೂ ಆ ಬೇಟೆಯಲ್ಲಿ ಭಾಗಿಗಳಾಗಿ ಒಂದು ಹಂದಿಯನ್ನು ಬೆನ್ನಟ್ಟಿಬರಲು ಅದು ಅವರನ್ನು ವಿಂಧ್ಯಾಚಳಕ್ಕೆ ಕರೆದೊಯ್ಯುವುದು. ಆಯಾಸದಿಂದಲೂ ಬಾಯಾರಿಕೆಯಿಂದಲೂ ಬಳಲಿ ಬೆಂಡಾಗಿ ಬರುತ್ತಾ ದಾರಿಯಲ್ಲಿ ಆಕಸ್ಮಿಕವಾಗಿ ಒಬ್ಬ ಮುನಿಕುಮಾರಿಯಿಂದ ಪಡೆದ ತೀರ್ಥವನ್ನು ಅದಕ್ಕಾಗಿಯೇ ಆಸೆಪಡುತ್ತಿದ್ದ ಬ್ರಾಹ್ಮಣನಿಗೆ ಕೊಟ್ಟು ಅವನ ಆಶೀರ್ವಚನವನ್ನು ಪಡೆದು ಎಲ್ಲೆಲ್ಲಿಯೂ ಅಲೆದು ಸುತ್ತಿ ಬೆಂಡಾಗಿ ಬಂದು ಒಂದು ಮಾವಿನಮರದ ಕೆಳಗೆ ಕುಳಿತುಕೊಳ್ಳುವರು. ಮಕರಂದನು ಪಕ್ಕದ ಕೊಳದಿಂದ ಶೀತಲವಾದ ನೀರನ್ನು ತಂದು ಕುಮಾರನಿಗೆ ಕೊಟ್ಟು ಸವಿಯಾದ ಆಹಾರದಿಂದ ತೃಪ್ತಿಪಡಿಸಲು ಕಂದರ್ಪನು ಅಲ್ಲಿಯೇ ಇದ್ದ ಲತಾಗೃಹದಲ್ಲಿ ಮಲಗಿದನು. ಆ ವೇಳೆಗೆ ಸರಿಯಾಗಿ ಆ ಮರದ ಮೇಲಿದ್ದ ವಸಂತದೋಹಳೆಯೆಂಬ ಹೆಣ್ಣುಗಿಳಿ ತನ್ನ ಪ್ರಿಯನಾದ ಚೂತಪ್ರಿಯನೆಂಬ ಗಿಳಿ ಬಾರದಿರಲು

ಗಿಡುಗಂ ಕೊಂಡುದೊ ಬೇಡರಿಟ್ಟಬಲೆಯೊಳ್ ಮೇಣ್
ಬಿಟ್ಟಿನೊ[1] ಪಕ್ಕವೇ[1]
ನುಡಿದತ್ತೊ ಹಿಡಿದನ್ಯ[2]ಶಾರಿಕೆ[2] ರತವ್ಯಾಪಾರದೊಳ್ ಪೊಯ್ವಳೊ

---

1 ರಕ್ಕೆ ಮುರಿಯಿತೊ. 2 ಹೆಣ್ಣು ಗಿಳಿ.

ತಡೆದಂ ಮತ್ಪ್ರಿಯನೆಂದು ನೊಂದು ತಳಿರ್ಗಳ್ [1]ನಾಂಬನ್ನೆಗಂ[1] ದುಃಖದಿಂ
ಗಡ [2]ಕೀರ[2]ಪ್ರಿಯಕಾಂತೆ ಸುಯ್ದು ಸುರಿದಳ್ ಭೋರೆಂದು [3]ಬಾಷ್ಪಾಂಬು[3]ವಂ ||

ಹಾಗೆ ಮಾವ್ಮಲ ಮರಗುತ್ತಿರ್ದ ಸಮಯಕ್ಕೆ ಸರಿಯಾಗಿ ಚೂತ ಪ್ರಿಯನು ತನ್ನ ಪ್ರಿಯೆಯು ಎಷ್ಟು ವಿರಹದಿಂದಲೆಯುತ್ತಿರುವಳೋ ಎಂದು ಓಡಿಬಂದು ಬೇಡಿ ಕೂಡಲಾಗಿ ಶಾರಿಕೆಯು ಇದರ ಸಾವಕಾಶಕ್ಕೆ ತಪ್ಪು ಕಾರಣವನ್ನು ನೆನೆದು ಕೋಪಿಸಿಕೊಳ್ಳಲು ಚೂತಪ್ರಿಯನು ಹೀಗೆಂದಿತು;

ಕಾರಣಮಿಂ ಪೆಱತುಳ್ಳೊಡೆ
ಶಾರಿಕೆ ನಿನ್ನಾಣೆಯೆನ್ನನ್+ಆಳ್ದತಿಲಲಿತಾ
ಕಾರೆಗೆ ವಾಸವದತ್ತೆಗೆ
ಮಾರನಿನ್+[4]ಅಟಿಲಾಗ[4] ತೆಱರಲಱಿಯದೆ ತಡೆದೆಂ.
ಶಿಶಿರೋಪಚಾರಮಾದೊಡೆ
[5]ಕುಶೇಶಯಾಶಯ[5]ದೊಳಾಯ್ದು ಕೊಯ್ದುಂ ಕೊರಲೊಳ್
ಶಶಿಮುಖಿಯರ್ ಸುತ್ತಿದೊಡೆ+ಆಂ
ವಿಶದ ಸರೋರುಹದ ಪೂವನಡುಕುತ್ತಿರ್ದೆಂ ||

ಆ ಮಾತನ್ನು ಕೇಳಿ ಶಾರಿಕೆಯು ಆ ವಿಷಯವನ್ನು ವಿಸ್ತಾರ ವಾಗಿ ತಿಳಿಸಬೇಕೆಂದು ಕೇಳಿಕೊಂಡಿತು.

---

1 ನೆಸೆಯುವವರೆಗೆ. ಒಪ್ಪಿಯಾಗುವವರೆಗೆ. 2 ಗಿಳಿ. 3 ಕಣ್ಣೀರು. 4 ದುಃಖವುಂಟಾಗಲು. 5 ಕೊಳ.

ಆಗ ಚೂತಪ್ರಿಯನು ಆ ವಿಷಯವನ್ನು ವಿಸ್ತರಿಸತೊಡಗಿತು.

[1]ಕುಸುಮಾಕರ[1]ದಾಕರವೆನೆ
[2]ಕುಸುಮಾಯುಧ[2]ನೆಂದುಮಿರ್ಪ ನೆಲೆಯೆನೆ ಜಗದೊಳ್
ಕುಸುಮ ಸುಕುಮಾರಿಯ ಸೌ
ಖ್ಯಸದನವೆನೆ ಮಿಸುಪುದು+[3]ಅಸದಳಂ ಕುಸುಮಪುರಂ

ಆ ಊರಿನರಸು ಶೃಂಗಾರಶೇಖರ. ಆತನ ಮನಃಪ್ರಿಯೆ ವಿಭ್ರಮಲೇಖೆ. ಅವರಿಗೆ ಬಹುಕಾಲ ಮಕ್ಕಳಿಲ್ಲದಿರಲು ಪದ್ಮಾವತೀದೇವಿಯನ್ನು ಅನನ್ಯಭಕ್ತಿಯಿಂದ ಪ್ರಾರ್ಥಿಸಿ

ಲತೆಯಂ ನಂದನಭೂಮಿ ದೀಪಿಕೆಯನಗ್ನಿಜ್ವಾಲೆ ರತ್ನಾಕರ
ಕ್ಷಿತಿ [4]ಮಾಣಿಕ್ಯಶಲಾಕೆ[4]ಯಂ ಪ್ರತಿಭೆ ಕಾವ್ಯಪ್ರೌಢಿಯಂ
ವೀಣೆ ಸಂ
ರುತಿಯಂ [5]ಪದ್ಮಿನಿ[5]ಯಂ ಮಹಾಸರಸಿ [6]ಕಂದರ್ಪಾಗ್ನಿ[6]ಯಂ
ಕಾಮದೇ
ವತೆ [7]ಪೆಂಪಿಂ[7] ಪಡೆವಂತೆ ಕಾಂತೆ ಪಡೆದಳ್ ಲೀಲಾವತೀ
ದೇವಿಯಂ

ಎಳಲತೆಯಂತೆ ಕೋಮಳಿಕೆಯಿಂದೆಳಮಾಣಿಕದಂತೆ
ಕಾಂತಿಯಿಂ
ಬೆಳಗಿಳಿಯಂತೆ ಸೋಲಿಪ ತೊದಳ್ನುಡಿಯಿಂದೆಳೆ
[1]ಯಂಚೆಯಂತೆವೊಲ್

---

1 ಸರೋವರ. 2 ಪುಷ್ಪಬಾಣ, ಮನ್ಮಥ. 3 ಅತಿಶಯ. 4 ಮಾಣಿಕ್ಯದ ಸರಳು. 5 ಕಮಲ. 6 ಕಾಮಾಗ್ನಿ, ಮನ್ಮಥನಿಂದುಂಟಾದ ಬೆಂಕಿ. 7 ಆಧಿಕ್ಯ. 8 ಹಂಸೆ.

ತಳರಡಿಯಿಂ ಮನಂಗೊಳಿಸಿದಂತಿರೆ ಪತ್ತಿಸಿ ತಾಂ ಬಟಿಕ್ಕದೇಂ
ಕಳಿದಳೊ ಬಟ್ಟೆಯಂತೆ [1]ಕಳಕೇಳಿಕೆ[1] ಬಾಳಿಕೆ ಬಾಲಕಾಲಮಂ

ಹಾಗೆಯೇ ಕೆಲವು ವರ್ಷಗಳು ಕಳೆದಮೇಲೆ ತನ್ನಾತ್ಮಜೆಯಲ್ಲಿ ಭುವನಮನೋಹರವಾಗುವ ಹಾಗೆ ಯವ್ವನವಸಂತ ನಡಿಯಿಟ್ಟುದನ್ನು ಶೃಂಗಾರಶೇಖರನು ಕಂಡು ಮಾರಾಕಾರರಾದ ರಾಜಕುಮಾರನನ್ನು ಬರಿಸಿ ಸ್ವಯಂವರವನ್ನೇರ್ಪಡಿಸಿದನು. ಆ ರಾಜಸಮಾಜದಲ್ಲಿ ರಾಜಕುಮಾರಿಗೆ ಯಾರೂ ಒಪ್ಪಿತವಾಗಲಿಲ್ಲ. ಅವಳ ಸಖೀಜನರೆಲ್ಲರೂ ಈಕೆಯ ಯವ್ವನವು ಕೇತಕೀವನದಂತೆ ನಿಷ್ಫಲವಾಯಿತಲ್ಲ ಎಂದು ಚಿಂತಿಸುತ್ತಿರಲು ಒಂದು ದಿನ ನಿಶಾವಸಾನ ಸಮಯದಲ್ಲಿ ಲೀಲಾವತಿಯು

ಹರನೇತ್ರಜ್ವಾಲೆಯಿಂ ಬೇವ+[2]ಅತನು[2]ವನ್+ಉಮೆ
ಕಾಣುತ್ತೆ ತನ್ಮೌಳಿಯೊಳ್ ಸುಂ
ದರಲೇಖಾಮಾತ್ರಮಿರ್ಪಂತಮೃತಕಿರಣನಂ
ಕೊಂಡಪೂರ್ವಪ್ರಭಾವಂ
ಜರಿ ಮೆಯ್ಯೊಳ್ [3]ಪತ್ತುವನ್ನಂ[3] ಪಿಡಿದು ತಳೆದು ಮತ್ತೆತ್ತಿ
ದಂತಿರ್ದ ಶೋಭಾ
ಕರರೂಪಾಕಾರನಂ ತತ್ತರುಣಿ ಕನಸಿನೊಳ್ ಕಂಡು
ಸೋಲ್ತಳ್ ಮೃಗಾಕ್ಷಿ

ಆಗ ಅತಿಮುಗ್ಧೆಯಾದ ಆ ತರುಣಿಗೆ

---

1 ರೂಪವತಿ. 2 ಮನ್ಮಥ. 3 ಅಂಟಿಕೊಳ್ಳುವವರೆಗೆ.

[1]ಇಷುಪ್ರಾಯಂ ಗೇಯಂ ಮುಷಿತಕಿರಣಂ ಶೀತಕಿರಣಂ
ವಿಷಾಹಾರಂ ಹಾರಂ ಹೃದಯದಹನಂ ಗಂಧವಹನಂ
ದ್ವಿಷಜ್ಜಾತಂ ಚೂತಂ ಪರಿಭವನಮಾಯ್ತಂಬುಜವನಂ
ವಿಷಾದಾಯಂ ಕಾಯಂ ವನಿತೆಗವನಿಂ ಚಿತ್ತಭವನಿಂ ||

ಅವಳನ್ನು ಸಮಾಧಾನಮಾಡುವುದಕ್ಕೆ ಬಂದ ಸಖಿಯಾದ ಕಳಾವತಿಯು ಅದು ವಿರಹವೇದನೆಯೆಂದು ತಿಳಿದು ಅವಳ ಮನದನ್ನನ ಚಿತ್ರವನ್ನು ಬರೆದು ತೋರಿಸಿದರೆ ಅವನನ್ನು ಪಡೆಯಲು ಸಾಧ್ಯವಾಗಬಹುದೆಂದು ಸೂಚಿಸಲಾಗಿ ಲೀಲಾವತಿಯು ಪ್ರತ್ಯಕ್ಷವಿರುವ ಪ್ರಿಯನನ್ನು ಪ್ರತಿಮಾಗತವನ್ನಾಗಿ ಮಾಡುವಂತೆ ಅತಿ ಸುಂದರವಾಗಿ ಚಿತ್ರಿಸಿದಳು. ಅವನ ರೂಪು

ಶಶಿಯುಂ [2]ಜಿ[3]ೋಡಾಡುತಿರ್ಕುಂ[2] ಮೊಗಮ್+ಅಲಘುಭುಜಂ
[3]ಜಾನುವಂ ಜಕ್ಕುಲಿಕ್ಕುಂ[3]
ದಶನಂ ದಾಳಿಂಬದ ಬಿತ್ತುಗಳನ್+ಇಟಿಸುಗುಂ
ನೀಳನೀರೆಜಶೋಭಂ
ವಿಶದಶ್ರೀನೇತ್ರಂ+ಅಂಗಂ ವಿಕಚ ಕುವಲಯಶ್ಯಾಮಲಂ
ಪ್ರಾಯಂ+ಅಷ್ಟಾ
ದಶವರ್ಷಂ ತಾನೆನಲ್ ಚಿತ್ರದೊಳಮವನ ರೂಪಾದುದು+
[4]ಆದಂ[4] ವಿಚಿತ್ರಂ

---

1 ಆಕೆಗೆ ಮನ್ಮಥನಿಂದ ಸಂಗೀತವು ಬಾಣಕ್ಕೆ ಸಮಾನವೂ ಚಂದ್ರನು ಕಿರಣವಿಲ್ಲದವನೂ ಹಾರವು ವಿಷಪ್ರಾಯವೂ ಗಾಳಿಯು ಎದೆಯನ್ನುರಿಸ ತಕ್ಕದ್ದೂ ಮಾವಿನ ಮರವು ಶತ್ರುಸಮವೂ ಕಮಲದ ತೋಟಗಳೆಲ್ಲ ದುಃಖಕ್ಕೆ ಕಾರಣವೂ ಶರೀರವು ವಿಷಪೂರಿತವೂ ಆದುವು. 2 ಹಾಸ್ಯ ಮಾಡುತ್ತಿದೆ. 3 ಮಂಡಿಯನ್ನು ತಗಲುತ್ತಿದೆ. 4 ವಿಶೇಷವಾಗಿ.

ಅದನ್ನೇ ನೋಡುತ್ತ ವಿರಹಕಾತರೆಯಾಗಿದ್ದ ಅವಳಿಗೆ ಶುಶ್ರೂಷೆ ಮಾಡುತ್ತಿದ್ದುದರಿಂದ ಹೊತ್ತಾಯಿತು ಎಂದು ಹೇಳುತ್ತಾ ಚೂತಪ್ರಿಯನು ಹಾಗೆಯೇ ನಿದ್ದೆಹೋಯಿತು.

ಅದನ್ನು ಕೇಳುತ್ತ ಮಲಗಿದ್ದ ಮಕರಂದನು ಮಾನವ ಮದನನಿಗೆ ಇದು ನಿನ್ನ ವಿಚಾರವೆಂದು ತಿಳಿಸಿದನು. ಮಾರನೆಯ ದಿನ ಅವರು ಅಲ್ಲಿಂದ ಹೊರಟು ದಾರಿಯಲ್ಲಿ ಸಿಕ್ಕಿದ ಜಿನಬಿಂಬಗಳನ್ನು ನೀರ್ವೂಗಳಿಂದರ್ಚಿಸಿ ಪದ್ಮಾವತೀ ಪ್ರೇರಿತಮಾರ್ಗದಿಂದ ವಿಂಧ್ಯಾಚಲದಡಿಯನ್ನು ಸೇರಿ ಅಲ್ಲಿ ಆನೆಗಳ ನೀರಾಟವನ್ನೂ ಶಬರರ ಕೌಶಲಗಳನ್ನೂ ನೋಡುತ್ತ ದಾರಿಯಲ್ಲಿದ್ದ ಯಕ್ಷಯಕ್ಷಿಯರನ್ನು ಪೂಜಿಸುತ್ತ 'ನಾಡಾಡಿಯಲ್ಲದ ತೀರ್ಥಸಾಮರ್ಥ್ಯಮುಂ ಸಮರ್ಥಿಸುತಂ ಮಹಾಮುನಿಗಳ ಮಹಿಮೆಯುಂ ಮನದೆಗೊಳುತ್ತ' ಇಂದ್ರಕೂಟವನ್ನು ಸೇರಿ ಚಂದ್ರಪ್ರಭನನ್ನು ವಂದಿಸಿ ಮುಂದೆ ನಡೆದು ಬೋಧಸಿಂಧುಭಟಾರಕರ್ಗೆ ಕೈಮುಗಿದು, ಅಲ್ಲಲ್ಲಿ ಸಿಕ್ಕಿದ ಜಿನಕೂಟಗಳಿಗಭಿವಂದಿಸಿ ಮಯೂಖನಿರ್ಜರ ಗಿರಿಯಲ್ಲಿ ವಿದ್ಯಾಧರಿಯರಾದ ವಿದ್ಯುಲ್ಲೇಖೆ ಚಂದ್ರಲೇಖೆಯರಿಂದ ಸತ್ಕಾರವನ್ನು ಪಡೆದು ಚಕ್ರೇಶ್ವರಿಯಿಂದ ಸಿದ್ಧರಸದ ಪೊಂಗೊಡವನ್ನು ಪಡೆಯುವರು. ಅಲ್ಲಿಯೇ ಕೆಲವು ಕಾಲವಿರುತ್ತಿರಲಾಗಿ ವಸಂತಸಮಯ ಪ್ರಾಪ್ತವಾಗಲು ಕಂದರ್ಪದೇವನಿಗೆ ವಿರಹತಾಪವು ಉಲ್ಬಣಿಸುವುದು.

ಅದೇ ಸಮಯದಲ್ಲಿ ಅತ್ತ ಲೀಲಾವತಿಗೂ ವಿರಹಜ್ವಾಲೆಯು ಅತ್ಯಧಿಕವಾಗುವುದು. ಆಗ ಲೀಲಾವತಿಯು ಸಖಿಯರ ಆದೇಶದಂತೆ ಕುಸುಮಪುರದ ಹೊರವಳಯದಲ್ಲಿದ್ದ ತನ್ನ ಮನೆದೇವತೆಯಾದ ಅಂಬಿಕೆಯನ್ನು ತ್ರಿಸ್ಥಾನ ಸಂಶುದ್ಧಿ

ಯಿಂದ ಇಷ್ಟಾರ್ಥಸಿದ್ಧಿಗಾಗಿ ಪ್ರಾರ್ಥಿಸಿ ಹಾಗೆಯೇ ಪಕ್ಕದಲ್ಲಿದ್ದ ಕಳಾವತಿಯುಮೇಲೆ ಮರೆದೊರಗಲು ದೇವಿಯು "ಉತ್ಪಲಿನಿಗ ಮೃತಕಿರಣಂ ಬರ್ಪತಿಂ[1]ದಿನಿರುಳೊಳ್ ನಿನ್ನಿನಿಯಂ ಬಂದಪನಿದ ನಂತೆ ನಂಬು ಕಮಲದಳಾಕ್ಷಿ; ನಿನ್ನ ಕನ್ನೆ ಮಾಡದೊಳೊಪ್ಪಂಗೆ ಯ್ಪುಪರಾಂಗಣದೊಳ್ ಕೈಗೆಯ್ದಿರು' ಎಂದು ಆಶ್ವಾಸನವನ್ನೀ ಯಲು ದೇವಿಯ ನುಡಿಯೆಂಬ ತಂಗಾಳಿಯ ತೀಟದಿಂದ ಎಚ್ಚೆತ್ತವ ಳಾಗಿ ಬಹು ಉತ್ಸಾಹದಿಂದ ತನ್ನ ನೆಲೆಮಾಡಕ್ಕೆ ಹೋಗಿ ಬಹು ರಮಣೀಯವಾದ ಬೆಳುದಿಂಗಳಿನ ರಾತ್ರಿಯಲ್ಲಿ ಶಯ್ಯಾಗೃಹದಲ್ಲಿ ಕಾದಿರಲು ಇತ್ತ ಕಂದರ್ಪನು ವಿರಹತಾಪವನ್ನು ಸಹಿಸಲಾರದೆ ಮೂರ್ಛೆಪೋಗುವನು. ಮಕರಂದನು ಶೈತ್ಯೋಪಚಾರಕ್ಕೆ ಕಮಲದಳಗಳನ್ನು ತರುವೆನೆಂದು ಹೋಗುವನು. ಆ ಕಾಲಕ್ಕೆ ಸರಿಯಾಗಿ ನಂದೀಶ್ವರ ಪೂಜಾವಲೋಕನೋತ್ಸುಕರಾಗಿ ಹೋಗು ತ್ತಿದ್ದ ಚಂದ್ರಲೇಖೆ ವಿದ್ಯುಲ್ಲೇಖೆಯರು ಏಕಾಕಿಯಾಗಿದ್ದ ಕಂದರ್ಪದೇವನನ್ನು ಪರ್ಣಲಘುವಿದ್ಯೆಯಿಂದ ತೆಗೆದುಕೊಂಡು ಹೋಗಿ ಲೀಲಾವತಿಯ ಶಯ್ಯಾತಳದಲ್ಲಿ ಈಡಾಡುವರು. ತರು ಣಿಯ ಶೀತಲ ದೇಹಸ್ಪರ್ಶದಿಂದ ಕಂದರ್ಪದೇವನಿಗೆ ಮೂರ್ಛೆ ಯಿಂದೆಚ್ಚರವಾಗುವುದು. 'ಅಂತೊಡನೆಚ್ಚೆತ್ತು ಭೋಂಕನೆ ನಿಡುಮಿಡುಕನೆ ಕಂಡು ತಳವೆಳಗಾಗಿ ತಲ್ಲಣಿಸಿ ತನುವೆಲ್ಲಮಂ ಪರ್ವುವಂತಿರೆ ಎರ್ದೆ ಪಸ್ಸನೆ ಪಾಱೆ ತೆಗೆಯಲುಂ ಪಡೆಯದೆ ಮೆಯ್ಮೆಯ್ಯನೊಱಸೆ ಬರಸಿ ಕುಳ್ಳಿರ್ದು [2]ಮರುಳ್ ಮುಸಗಿದಂತೆ[2]

---

[1] ಕನ್ನೈದಿಲೆಗೆ ಚಂದ್ರ ಬರುವ ಹಾಗೆ. [2] ಪಿಶಾಚಿ ಹಿಡಿದವರ ಹಾಗೆ.

ಓರೋರ್ವರ ಕೊರಲಿಂ ಮಣಿ
ಹಾರಮುಮಂ ತೆಗೆದು ಮುಗುಳಮಾಲೆಯುಮಂ ಚೇ
ತೋರಾಗರಸದೆ ಮೆಯ್ಮ್ಮರ್ಚಿ
ದೋರೋರ್ವರ ಕೊರಲೊಳಿಕ್ಕಿದರ್ ಸಂಭ್ರಮದಿಂ
[2]ಪದೆದು[2]+ಆಲಿಂಗಿಸುವಂತೆ ಮೋಹರಸದಿಂಪಂ ಸೂಸು
ವಂತೆ+ಒಂದನೊಂ
ದಿದಿರ್ಗೊಳ್ಪಂತೆ [3]ಕಡಂಗಿ[3] ತನ್ಮೊರ್ಮೆನಸುಂ ಗಂಟಿಕ್ಕುವಂ
ತಾಗಲ್+ಉ
ಣ್ಮಿದ ಲಜ್ಜಾಂಬುವನೀಂಟುವಂತೆ ಹೃದಯಂ
[4]ಕೋಟಿರ್ಪ್ಪಯ್ತು[4] ಕೈಕೊಳ್ವದೆಂ
ದೊದವಿಂ ಕೈಗುಡುವಂತೆ ಕಣ್ಗಳ್+ಒಲವಿಂ
ಮೇಲ್ವಾಯ್ದುವು+ಓರೊರ್ವರೊಳ್ ||
ಅಂತಿರ್ವರುಮೋರೊರ್ವರಂ ಒಜಿಲ್ದು ನೋಡುತ್ತಮಿರ್ದು
ಕನಸಿನೊಳೆ ಕಂಡ ರೂಪಂ
ಮನದೊಳ್ ಮಗುಳ್ದಾದಮುಜಿಸುವಂತಿರೆಯುಂ ಭೋಂ
ಕನೆ ಮೂರ್ಛೆವೋದರೇಕೆಯೊ
ಮನಸಂದು+ಒಂದಿದರ ಸುಖಮುನ್+ಅಜನ್+
ಎಡೆಗಡಿಪಂ ||
ಆ ವೇಳೆಗೆ ಪೂಜೆಯಿಂದ ಹಿಂತಿರುಗಿದ ವಿದ್ಯಾಧರಿಯರು ಕಂದರ್ಪದೇವನನ್ನು ಪುನಃ ಎತ್ತಿಕೊಂಡು ಹೋಗಿ ಮೊದಲಿ

---

2 ಆಶೆಪಟ್ಟು. 3 ಉತ್ಸಾಹಗೊಂಡ. 4 ಸೂರೆಹೋಗಿದೆ.

ದ್ದೆಡೆಯಲ್ಲಿಯೆ ಬಿಟ್ಟರು. ಬೆಳಗ್ಗೆ ಎಚ್ಚರವಾದ ಮೇಲೆ ಲೀಲಾವತಿ ಕಂದರ್ಪದೇವರಿಬ್ಬರಿಗೂ ವಿರಹತಾಪವು ಹೆಚ್ಚಿತು. ಪದ್ಮಾವತೀ ದೇವಿಯಿಂದ ಪ್ರೇರಿತವಾದ ಮಾರ್ಗದಲ್ಲಿ ನಡೆದು ಮಕರಂದ ನೊಡನೆ ಕಂದರ್ಪದೇವನು ಕುಸುಮಪುರದ ಉದ್ಯಾನಕ್ಕೆ ಬಂದು ಸೇರಿದನು. ಲೀಲಾವತಿಯೂ ತನ್ನ ಸಖಿಯರೊಂದಿಗೆ ಬಂದು ಅಲ್ಲಿಯೇ ಶೈತ್ಯೋಪಚಾರವನ್ನು ಪಡೆಯುತ್ತಿರಲು ಅವಳ ಸಖಿಯರು ನಿದ್ರಿಸುತ್ತಿದ್ದ ಕಂದರ್ಪದೇವನನ್ನು ಮದನನೆಂದೇ ಭ್ರಾಂತಿಗೊಂಡು ತಮ್ಮ ಸಖಿಯಲ್ಲಿಗೆ ಕರೆದೊಯ್ದು 'ಪದ್ಮಾವತೀ ಪ್ರಭಾವಕ್ಕೆ [1]ಬೆಕ್ಕಸಂಬಟ್ಟು[1] ವಧೂವರರ ಸಮಾನುರೂಪಾನು ರಾಗಕ್ಕೆ ಸಂತೋಷಂಬಟ್ಟು ಗಾಂಧರ್ವವಿವಾಹಮಂ ಮಾಱ್ಪ ಮನಮಂತಂದು ದಂಪತಿಗಳಂ ಬೇಱ[3]ಬೇಱ[3] [2]ಮಂಗಳವಸದನಂ ಗೆಯ್ಸಿ[2] [3]ಅಲರ್ವಸೆ[3]ಯೊಳಿರಿಸಿ ಪೊಸಮುತ್ತಿನ ಸೇಸೆಯಂ ಮುಡಿಯೊಳಾಂತು'

[4]ಗಂಧವಹಂಗಳ್[4] ಮಂಗಳ
ಗಾಂಧರ್ವಮನೆಸಗೆ ಮಧುರ [5]ಭೃಂಗೀರವ[5]ದಿಂ
ಗಂಧರ್ವವಿವಾಹಮನಾ
[6]ಬಂಧೂಕಾಧರೆಯರ[6]ವರ್ಗೆ ಮಾಡಿದರೊಲವಿಂ

ಅನಂತರ ಪ್ರಿಯಪ್ರೇಯಸಿಯರು ನಿರಂತರ ಸ್ವರ್ಗಸುಖ ಮನನುಭವಿಸಿ ಜಲಕ್ರೀಡೆ ವನವಿಹಾರಗಳಿಂದ ಕಾಲವನ್ನು

---

1 ಆಶ್ಚರ್ಯಪಟ್ಟು. 2 ಶುಭಕರವಾದ ಆಭರಣಗಳಿಂದ ಅಲಂಕರಿಸಿ. 3 ಹೂವಿನ ಹಾಸಿಗೆ. 4 ಗಾಳಿ. 5 ದುಂಬಿಯ ಧ್ವನಿ. 6 ಬಂದುಗೆ ಹೂವಿನಂತೆ ತುಟಿಯುಳ್ಳ ಸ್ತ್ರೀಯರು.

ಕಳೆಯುತ್ತಿರಲು ಒಂದು ದಿನ ಮಕರಂದನು ಕಂದರ್ಪದೇವನ ಕೈಗೆ ಲೀಲಾವತಿಯ ಚಿತ್ರವೊಂದನ್ನು (ಕಾಲಾವಲೋಕಿನೀ ಫಲಕ) ತಂದುಕೊಡುವನು. ಅವನು ಅದನ್ನು ನೋಡಿ ಪಕ್ಕದ ಲ್ಲಿದ್ದ ಲೀಲಾವತಿಗೆ ತೋರಿಸದೆಯೇ ತನ್ನ ಸ್ನೇಹಿತನಿಗೆ ಹಿಂದಿರುಗಿಸುವನು. ಲೀಲಾವತಿಯು ಅದು ಪರಸ್ತ್ರೀಯ ಚಿತ್ರ ವೆಂಬ ಭ್ರಾಂತಿಯಿಂದ ಉದ್ರಿಕ್ತಳಾಗಿ ಮತ್ಸರದಿಂದ ಅದನ್ನು ಒಡೆದು ಭಾವಿಯಲ್ಲೆಸೆದು ಓಡಿಹೋಗಿ ಸಖೀಜನದೊಡನೆ ಲತೆಯಾಗಿ ಹೋಗಿಬಿಡುವಳು. ಸತಿಯನ್ನು ಕಾಣದೆ ವಿರಹಾ ನಲಜ್ವಾಲೆಯಿಂದ ಸಂತಪ್ತನಾದ ಕಂದರ್ಪನು ಅವಳನ್ನು ನೆನದು ಅಲವರಿಸುತ್ತ ವನದಲ್ಲೆಲ್ಲ ಅಲೆದು ಆ ಲತೆಯ ಹತ್ತಿರವೇ ಬಂದು ಅವಳನ್ನೇ ಹೋಲುತ್ತಿದ್ದ ಅದನ್ನು ಮೋಹಪರವಶತೆ ಯಿಂದ ಆಲಿಂಗಿಸಲು

[1] ಸಿತಪುಷ್ಪಂ ಸ್ಮಿತನೇತ್ರಮಾಯ್ತು[1] + ಎಳದಳಿರ್
ಬಾಯಾಯ್ತು ಬಿಣ್ಗೊಂಚಲು
ನ್ನತವಕ್ಷೋರುಹಮಾಯ್ತು ತುಂಬಿ ಕುರುಳಾಯ್ತೊ
ಳ್ಗೊಂಬು ತೋಳಾಯ್ತು ತ
ಲ್ಲತೆ ಲೀಲಾವತಿಯಾಯ್ತು + ಇದೇನಮೃತಮೋ
ಘಮಾರ್ಗಂಬುವಾಲಿಂಗನಂ
ಮೃತಸಂಜೀವನಮೋ ರಸಂ ಹರಣಮೋ ಶ್ರೀರೂಪ
ಕಂದರ್ಪನಾ ||

ಒಡನೆಯೇ ಲೀಲಾವತಿಯು ಪಕ್ಕದ ಲತೆಗಳನ್ನಪ್ಪಲು ಮುನ್ನಿನಂತೆಲ್ಲರೂ ಸಖಿಯರಾದರು. ಪ್ರಿಯಪ್ರೇಯಸಿಯರು

---

[1] ಬಿಳಿಯ ಹೂವೇ ನಗೆಗಣ್ಣಾಯಿತು.

ಸಮಾಧಾನಗೊಂಡು ಹಿಂದಿನಂತೆಯೇ ಸುಖಸಾಮ್ರಾಜ್ಯದಲ್ಲಿ ಮಗ್ನರಾದರು. ಹೀಗಿರುವಲ್ಲಿ ಒಂದು ದಿನ ಲೀಲಾವತಿಯಿಲ್ಲದೆ ಕಂದರ್ಪದೇವನೊಬ್ಬನೇ ವನವಿಹಾರದಲ್ಲಿರುವಾಗ ಗಂಧಗಿರಿಗೊಡೆಯನಾದ ವಸಂತಶೇಖರನೆಂಬ ವಿದ್ಯಾಧರನ ಮನೋಹರಿ, ಲಾವಣ್ಯ ವಿಭ್ರಮರೂಪಗಳಲ್ಲಿ ಲೀಲಾವತಿಗೂ ನಾಲ್ಕು ಬೆರಳು ಮಿಗಿಲೆನಿಸಿದ ಮದನಮಂಜರಿಯೆಂಬುವಳು ಕಂದರ್ಪದೇವನಲ್ಲಿ ಮೋಹಗೊಂಡು ಗಂಡನ ಕಣ್ತಪ್ಪಿಬಂದು ಅವನನ್ನು ಹಿಡಿದುಕೊಳ್ಳುವಳು. ಆಗ [1]ಪಾಣ್ಬರಮಲ್ಲ[1]ನಾದ ಕಂದರ್ಪದೇವನು 'ಪುರುಷವ್ರತಕ್ಕೆ ಭಂಗಂ ಬಂದುದು, ಪರವಧುವಂ ನೋಡಿದಂದು' ಎಂದು ಅವಳನ್ನು ತಿರಸ್ಕರಿಸಲು ಅವಳು

ಪ್ರದಿದ ಗುಣಮೆಂಬುದಂ ಸ
ಗ್ಗದ ಸುಖಮಂ ಕೊಳಲಿವೇಡ ಪೊಣ್ಣೊಲವಿಂ
ಬಂದುದೆ ಸಗ್ಗಮಲ್ತೆ ? ಕಡು [2]ಸೋ
ವುದೆ[2] ತನಗಿಂತೇಕೆ [3]ಕಿತವ[3] [4]ಪಙುವಙುಯುಪ್ಪೆ[4]

ಬಾರದ ಭವಮಂ ಬರ್ಪರ್
ಕೂರಿಸಲ್ + ಅಬಲೆಯರನ್ + ಅವರೆ ಕೂರ್ತುರ್ + ಎ
ಙಗಿದೊಡಾ
ಭಾರಕ್ಕೆ ತಲೆಯನೂಙುವ
ರಾರುಂ ಪುರುಷರನೆ ಪೇೞ್ದು ಪಾತಕರೊಳರೆ

'ಎಂದು ಅತಿಸುಗುಣಂ ಜೋರಲಕ್ಷಣಂ ಎಂಬಂತೀಗಡಿನ ಗಂಡರ ನಾಲಗೆಯ ನನ್ನಿಯುಂ ಕಚ್ಚೆಯ ಶೌಚಮುಮೆಲ್ಲಂ

[1] ವ್ಯಭಿಚಾರಿಗಳನ್ನೆಲ್ಲ ಧ್ವಂಸಮಾಡುವವನು. [2] ಅಟ್ಟುವುದೇ ? [3] ಮೋಸಗಾರ. [4] ತಬ್ಬಿಬ್ಬಾಗುತ್ತೀಯೆ ?

ನಿಲಲಜೀವುವೆ ? ಮಱುಗಿಸದೆ ಕೂಡೆಂದು ಕಾಲ್ವಿಡಿದುಮೆಂತು ನುಡಿದುಮಾಜದೆ ಸಿಗ್ಗಾಗಿ [1]ಕೋಳ್ವಪ್ಪಿದುರಗಕಾಂತೆಯಂತೆ[1] ಕಿಡಿಕಿಡಿವೋಗಿ ಅವನಂ ವಿಡ್ಯೆಯೊಳ್ ಮಾಡಿದಳ್ ಕುರವಕವಂ.' ಲೀಲಾವತಿಯು ಮಲ್ಲಿಕಾಮಂಟಪದಲ್ಲಿ ನಿಜವಲ್ಲಭನನ್ನು ಕಾಣದೆ ವಿರಹೋತ್ಕಂಠೆಯಾಗಿ ವನದಲ್ಲೆಲ್ಲ ತೊಳಲಿ ಬೆಂಡಾಗಿ ಆ ಕುರುವಕದ ಸಮೀಪಕ್ಕೆ ಬಂದು ಅದನ್ನು ನೋಡಿ ಮೋಹಾ ವಿಷ್ಟಳಾಗಿ ಪ್ರಾಣವನ್ನು ನೀಗಿಕೊಳ್ಳಬೇಕೆಂದು ನಿಷ್ಕರ್ಷಿಸಿ ಸಖಿ ಯಾದ ಕಳಭಾಷಿಣಿಯ ಸೂಚನೆಯಂತೆ ಇದುವರೆಗೆ ಪುಷ್ಪಿಸ ದಿದ್ದ ಆ ಕುರುವಕಕ್ಕೆ ಮೊದಲು ದೋಹದವನ್ನು ಮಾಡಿ ಅನಂತರದಲ್ಲಿ ತನ್ನ ಪ್ರತಿಜ್ಞೆಯನ್ನು ಪೂರೈಸುವೆನೆಂದು

ಬಿದಿ ನಿನ್ನೊಳ್ ನೆರೆದಿರ್ಪ [2]ಸೈಪನ್[2]+ಎನಗಿಂತೀ
ಮೆಯ್ಯೊಳಾ ಪಾಪಿ ಮಾ
ಡಿದನಲ್ಲಿಂ ಮಱುಮೆಯ್ಯೊಳಾದೊಡಮೆಲೆ ಪ್ರಾಣೇಶ ನೀಂ
ಪಿಂಗದಿ
ರ್ಪುದು ತಟ್ಟಿತ್ತೆನ್ನೊಡನೆಂದು ಮಾಡಿ ಮರನಂ ಕಂದರ್ಪನಂ
ಕಾಂತಭಾ
ವದಿನೊಲ್ದಪ್ಪಿದೊಡಾದುದಾ ಕುರವಕಂ ಸೌಂದರ್ಯ
ಸಂಕ್ರಂದನಂ |

ಹೀಗೆ ಪುಣ್ಯವಂತರಿಗೆ ಮಣ್ಣನ್ನು ಹಿಡಿದರೂ ಹೊನ್ನಾಗುವ ಹಾಗೆ ಆ ಚಂದ್ರಮುಖಿಯು ಮರವನ್ನಪ್ಪಲು ಅದು ಚಂದ್ರೋ ದಯನಾದುದನ್ನು ಸಖಿಯರು ಕಂಡು ಚರಿತಾರ್ಥೆಯರಾಗಿ

---

[1] ಬಂಧನದಿಂದ ಬಿಡಲ್ಪಟ್ಟ ಹೆಣ್ಣು ಹಾವಿನಂತೆ. [2] ಅದೃಷ್ಟ.

ರಾಗಿಸಿ ಲೀಲಾವತಿಯನ್ನು 'ದೇವಿ ಲಕ್ಕ ದೀವಳಿಗೆ ಕಾಣು, ನಿನ್ನೋಲೆ ಕಲ್ಲೋಲೆಯಕ್ಕೆ' ಎಂದು ಹರಸುವರು. ಆಗಲೇ ಚೂಡಾಮಣಿ ರಾಜನು ಪದ್ಮಾವತಿಯೂ ಕುಸುಮಪುರಕ್ಕೆ ಬರುವರು. ಶೃಂಗಾರಶೇಖರ ವಿಭ್ರಮಲೇಖೆಯರು ಅವರನ್ನೂ ಮಗಳೊಡನಿರುವ ಅಳಿಯನನ್ನೂ ಬಹಳ ಸಂಭ್ರಮದಿಂದ ಬರಮಾಡಿಕೊಳ್ಳುವರು. ನವದಂಪತಿಗಳು ತಂದೆತಾಯಿಗಳಿಗೂ ಅತ್ತೆಮಾವಂದಿರಿಗೂ ನಮಸ್ಕರಿಸಿ ಆಶೀರ್ವಾದವನ್ನು ಪಡೆದು ಚೂಡಾಮಣಿ ರಾಜನೊಡನೆ ಜಯಂತೀಪುರಕ್ಕೆ ಪ್ರಯಾಣ ಮಾಡುವರು.

ಈ ಕಥಾಸಂಗ್ರಹವನ್ನು ನೋಡಿದಾಗ ನೇಮಿಚಂದ್ರನ ಈ ಕಥೆಗೆ ಸಂಸ್ಕೃತದಲ್ಲಿ ಶ್ಲೇಷಾಲಂಕಾರಕ್ಕೆ ಹೆಸರುವಾಸಿಯಾದ ಸುಬಂಧುವಿನ 'ವಾಸವದತ್ತೆ'ಯೆಂಬ ಗದ್ಯ ಕಥಾನಕವು ಮೂಲವಿರಬಹುದೆಂಬ ಶಂಕೆಯುಂಟಾಗುತ್ತದೆ. ಕವಿಯೆ ಅನೇಕ ಸಲ ಲೀಲಾವತಿಯನ್ನು ವಾಸವದತ್ತೆಯೆಂದೇ ನಿರ್ದೇಶಿಸಿದ್ದಾನೆ. ಅಲ್ಲದೆ ಇವೆರಡಕ್ಕೂ ಅನೇಕ ಸಾಮ್ಯಗಳು ಕಂಡುಬರುವುವು. ಲೀಲಾವತಿ, ಕಂದರ್ಪದೇವ (ಕೇತು), ಕುಸುಮಪುರ, ಶೃಂಗಾರಶೇಖರ, ಮಕರಂದ, ಚಿಂತಾ(ಚೂಡಾ)ಮಣಿ ಮೊದಲಾದ ಹೆಸರುಗಳು ಎರಡರಲ್ಲಿಯೂ ಸ್ವಲ್ಪ ವ್ಯತ್ಯಾಸದಿಂದ ಒಂದೇ ರೂಪದಲ್ಲಿವೆ. ನಾಯಕ ನಾಯಿಕೆಯರು ಪರಸ್ಪರ ಕನಸು ಕಾಣುವುದು, ನಾಯಿಕೆಯನ್ನು ಹುಡುಕಿಕೊಂಡು ಮಿತ್ರರೊಡನೆ ಹೊರಡುವುದು, ಗಿಳಿಯಿಂದ ಸಮಾಚಾರವನ್ನು ಪಡೆಯುವುದು, ವಿಂಧ್ಯಪರ್ವತದ ತಪ್ಪಲಿನಲ್ಲಿ ಕತೆ ನಡೆಯುವುದು, ನಾಯಿಕೆಗೆ ಸ್ವಯಂವರದಲ್ಲಿ ಮತ್ತಾರಲ್ಲಿಯೂ ಮನಸ್ಸೊಲಿಯದಿರುವುದು—ಇವೇ ಮೊದಲಾದುವು

ಪರಸ್ಪರ ಸಂಬಂಧವನ್ನು ಸೂಚಿಸುತ್ತವೆ. ಆದರೆ ನೇಮಿಚಂದ್ರನ ಕೈವಾಡವೂ ಕೌಶಲ್ಯವೂ ಕಾಣುವುದು ಅವುಗಳಿಗಿರುವ ವ್ಯತ್ಯಾಸಗಳಲ್ಲಿ. ಸಂಬಂಧುವಿನ ಗ್ರಂಥದಲ್ಲಿ ಕಥಾಸೂತ್ರ ಬಹು ಶಿಥಿಲವಾದುದು. ಅದರ ಉತ್ತರಾರ್ಧಕ್ಕೂ ಇಲ್ಲಿಯ ಕತೆಗೂ ಸ್ವಲ್ಪವೂ ಸಾಮ್ಯವಿಲ್ಲ. ಆ ಕಥೆಯ ಪ್ರಕಾರ ವಾಸವದತ್ತೆಯು ವಿರಹದಿಂದ ತಪಿಸುತ್ತಿರುವಾಗ ಅವಳ ಸಖಿಯರು ತಮಾಲಿಕೆಯೆಂಬ ಶಾರಿಕೆಯ ಮೂಲಕ ಕಂದರ್ಪಕೇತುವಿಗೆ ಒಂದು ಕಾಗದವನ್ನು ಕಳುಹಿಸುವರು. ಆದರಿಂದ ಎಲ್ಲ ವಿಷಯವನ್ನು ತಿಳಿದ ನಾಯಕನು ಮಕರಂದನೊಡನೆ ಕುಸುಮಪುರಕ್ಕೆ ಬಂದು ಲೀಲಾವತಿಗೂ ಪುಷ್ಪಕೇತುವಿಗೂ ನಿಷ್ಕರ್ಷೆಯಾಗಿದ್ದ ವಿವಾಹವನ್ನು ತಪ್ಪಿಸಿ ಸಖಿಯರ ಪ್ರಾರ್ಥನೆಯ ಪ್ರಕಾರ ವಾಸವದತ್ತೆಯನ್ನು ಕುದುರೆಯ ಮೇಲೆ ಕೂರಿಸಿಕೊಂಡು ಹೊರಟು ವಿಂಧ್ಯಾಟವಿಗೆ ಬಂದು ಸೇರುವನು. ರಾತ್ರಿ ಆಯಾಸಪರಿಹಾರಕ್ಕಾಗಿ ಪ್ರಿಯಪ್ರೇಯಸಿಯರು ಒಂದು ಲತಾಮಂಟಪದಲ್ಲಿ ಪವಡಿಸುವರು. ಮಾರನೆಯ ದಿನ ಉದಯಕಾಲದಲ್ಲಿ ಪತಿದೇವನ ಉಪಚಾರಕ್ಕಾಗಿ ಹಣ್ಣು ಹಂಪಲುಗಳನ್ನು ತರಲು ಅವನಿಗಿಂತ ಮುಂಚೆ ಎದ್ದುಹೋದ ವಾಸವದತ್ತೆಯನ್ನು ಇಬ್ಬರು ಕಿರಾತರು ಕಂಡು ಅವಳ ಮೇಲೆ ಮೋಹಗೊಂಡು ಅವಳನ್ನು ಪಡೆಯಲು ತಮ್ಮ ತಮ್ಮಲ್ಲಿಯೇ ಕಾದಾಡಿ ಮಡಿಯುವರು. ತಪೋವನವೆಲ್ಲವೂ ರಕ್ತಮಯವಾಗಲು ಅಲ್ಲಿದ್ದ ಮುನಿಯು ಕೋಪಗೊಂಡು ಅವಳಿಂದ ತನ್ನಾಶ್ರಮವು ಅಪವಿತ್ರವಾಯಿತೆಂದು ವಾಸವದತ್ತೆಯು ಕಲ್ಲಾಗುವಂತೆ ಶಾಪ ಕೊಡುವನು. ವಾಸವದತ್ತೆಯು ವಿಶೇಷವಾಗಿ ಬೇಡಿಕೊಂಡ ಮೇಲೆ ಆ ಮುನಿಯು

ಕಂದರ್ಪಕೇತುವಿನ ಸ್ಪರ್ಶದಿಂದ ಶಾಪವಿಮೋಚನವಾಗುವು ದೆಂದು ತಿಳಿಸುವನು. ಅವಳು ಕಲ್ಲಾಗುವಳು. ಕಂದರ್ಪ ಕೇತುವು ಪ್ರಿಯೆಯನ್ನು ಕಾಣದೆ ವಿರಹದಿಂದ ತೊಳಲಿ ಸಮುದ್ರದ ದಡದಲ್ಲೆಲ್ಲಾ ಅಲೆದು ಪ್ರಾಣಹತ್ಯ ಮಾಡಿಕೊಳ್ಳ ಬೇಕೆಂದು ಯತ್ನಿಸುತ್ತಿರುವಾಗ ಅಶರೀರವಾಣಿಯಾದುದನ್ನು ಕೇಳಿ ಶಿಲಾಪ್ರತಿಮೆಯನ್ನು ಅಪ್ಪಿಕೊಂಡು ವಾಸವದತ್ತೆ ಯನ್ನಾಗಿಸಿ ಅವಳೊಡನೆ ತನ್ನೂರಿಗೆ ತೆರಳುವನು.

ಬಹುಶ್ರುತನೂ ವಿದ್ವಾಂಸನೂ ಆದ ನೇಮಿಚಂದ್ರನು ತನ್ನ ಕತೆಯಲ್ಲಿ ಅನೇಕ ಮಾರ್ಪಾಟುಗಳನ್ನು ಮಾಡಿ ಕೊಂಡಿದ್ದಾನೆ. ಆತನಿಗೆ ತನ್ನ ಹಿಂದೆ ಇದ್ದ ಅನೇಕ ಗ್ರಂಥಗಳ ಪರಿಚಯವಿದ್ದಿರಬೇಕು. ಅವುಗಳಿಂದೆಲ್ಲ ಕೆಲವಂಶಗಳನ್ನು ಆಯ್ದು ತುಂಬಿ ತನ್ನ ಕತೆಯನ್ನು ಭಾವಪೂರ್ಣವನ್ನಾಗಿ ಮಾಡಿದ್ದಾನೆ. ಐಂದ್ರಜಾಲಿಕನಾದ ಮಾಯಾಭುಜಂಗನ ಪ್ರಸಂಗವನ್ನು ರಾಜಶೇಖರನ ‘ ಕರ್ಪೂರ ಮಂಜರಿ ’ಯಿಂದ ಆರಿಸಿ ಕೊಂಡಿರಬೇಕು. ಲೀಲಾವತಿಯು ಲತೆಯಾಗಿ ಹೋಗುವ ಭಾಗವು ಕಾಳಿದಾಸನ ‘ ವಿಕ್ರಮೋರ್ವಶೀಯ ’ದ ಮೂರನೆಯ ಅಂಕದಿಂದ ಪ್ರೇರಿತವಾಗಿರಬೇಕು. ಪದ್ಮಾವತಿ, ಅಂಬಿಕಾ, ಜೈನ ದೇವಾಲಯಗಳು, ಬೋಧಸಿಂಧು ಭಟಾರಕರು, ಚಂದ್ರ ಪ್ರಭಜಿನ, ಚಂದ್ರಲೇಖೆ, ವಿದ್ಯುಲ್ಲೇಖೆ ಮೊದಲಾದವರನ್ನು ಕತೆಯ ಮಧ್ಯೆ ಸೇರಿಸಿ ಕಥೆಗೆ ಜೈನ ಧರ್ಮದ ಛಾಯೆಯನ್ನು ತಂದಿದ್ದಾನೆ. ಮಹಾಕಾವ್ಯದ ಪ್ರಧಾನ ಅಂಗಗಳಾದ ಅಷ್ಟಾದಶ ವರ್ಣನೆಗಳನ್ನು ಮಧ್ಯೆ ಮಧ್ಯೆ ಸೇರಿಸಿ ನವರಸಗಳಿಗೂ ಸ್ಥಾನಗಳನ್ನು ಕಲ್ಪಿಸಿದ್ದಾನೆ. ಕೆಲವು ಉಲ್ಲೇಖಗಳು ವಾಸ್ತವವಾಗಿಯೂ ಆಕರ್ಷಕವಾಗಿವೆ. ಚಂದ್ರಲೇಖೆ, ವಿದ್ಯು

ಲ್ಲೀಖೆಯರ ವೃತ್ತಾಂತ, ಅವರು ಪರ್ಣಲಘು ವಿದ್ಯೆಯಿಂದ ನಾಯಕನನ್ನು ನಾಯಿಕೆಯಲ್ಲಿಗೆ ಕರೆದುತರುವುದು, ಫಲಕದ ನೆಪವಾದ ಮನಸ್ತಾಪ, ಮದನಮಂಜರಿಯ ವೃತ್ತಾಂತ ಮೊದಲಾದುವು ಕವಿಯ ಸ್ವಂತವಾದ ಜೋಡಣೆಗಳು. ಪುಷ್ಪಕೇತುವಿನ ಪ್ರಸಂಗವನ್ನೂ ನಾಯಿಕೆಯು ಶಿಲೆಯಾಗುವುದನ್ನೂ ಮಾರ್ಪಡಿಸಿಕೊಂಡಿರುವುದು ರಸವತ್ತಾಗಿದೆ. ನಾಯಿಕೆಯು ನಾಯಕನ ಚಿತ್ರಪಟವನ್ನು ಬರೆಯುವುದು, ಅಂತಃಪುರದಲ್ಲಿ ಪ್ರಿಯಪ್ರೇಯಸಿಯರ ಸುಖಾನುಭವ, ಅಂಬಿಕಾವನದಲ್ಲಿ ಲೀಲಾವತೀ ಕಂದರ್ಪದೇವರ ಪ್ರಣಯಪ್ರಸಂಗ, ಮದನಮಂಜರಿಯಿಂದ ಕಂದರ್ಪದೇವನು ಕುರವಕವಾಗುವಿಕೆ ಇವೇ ಮೊದಲಾದವು ರೋಮಾಂಚಕಾರಿಯಾಗಿವೆ.

ಸುಮಾರು ಕ್ರಿ. ಶ. ೮೦೦ರಲ್ಲಿ ಕುತೂಹಲನೆಂಬ ಕವಿಯಿಂದ ರಚಿತವಾದ 'ಲೀಲಾವತಿ'ಯೆಂಬ ಹೆಸರಿನ [1]ಪ್ರಾಕೃತ ಗ್ರಂಥ[1]ವೊಂದಿದೆ. ಇದು ಪ್ರತಿಷ್ಠಾನಪುರದರಸನಾದ ಹಾಲ (ಶಾತವಾಹನ)ನಿಗೂ ಸಿಂಹಳ ಪುತ್ರಿಯಾದ ಲೀಲಾವತಿಗೂ ಸಂಬಂಧಿಸಿದ ಪ್ರೇಮಕಥೆ. ಅದಕ್ಕೂ ನೇಮಿಚಂದ್ರನ ಲೀಲಾವತಿಗೂ ಸಾಕ್ಷಾತ್ ಸಾಮ್ಯಗಳಿಲ್ಲದಿದ್ದರೂ ಕತೆಯ ಹೆಸರಿನ ಸಾಮ್ಯ, ಪ್ರೇಮದ ಬೆಳವಣಿಗೆಯ ಸ್ವರೂಪ ಮೊದಲಾದುವೇ ಅಲ್ಲದೆ ಗಂಧನದಿ, ಅದರ ಪಕ್ಕದ ಅಂಬಿಕಾ ದೇವಾಲಯ, ಅಲ್ಲಿಯ ಜಿನಭಿಕ್ಷು ಮೊದಲಾದುವುಗಳ ವರ್ಣನೆ ಕುತೂಹಲನ ಗ್ರಂಥದಲ್ಲಿ ಬರುವ ಗೋದಾವರಿ, ಭವಾನೀದೇವಾಲಯ,

---

[1] ಈ ಗ್ರಂಥವನ್ನು ಡಾ|| ಎ. ಎನ್. ಉಪಾಧ್ಯೆಯವರು ಉತ್ತಮ ರೀತಿಯಲ್ಲಿ ಸಂಶೋಧಿಸಿ ಪೀಠಿಕಾದಿ ಉಪಯುಕ್ತಾಂಶಗಳೊಡನೆ ಪ್ರಕಟಿಸಿದ್ದಾರೆ.

ಅಲ್ಲಿರುವ ನಗ್ನ ಪಾಶುಪತ ಮೊದಲಾದುವುಗಳನ್ನು ಜ್ಞಾಪಕಕ್ಕೆ ತರುತ್ತವೆ. ನೇಮಿಚಂದ್ರನು ಪ್ರಾಕೃತದಲ್ಲಿ ವಿದ್ವಾಂಸನಾಗಿರುವುದೇ ಅಲ್ಲದೆ ತನ್ನ ಗ್ರಂಥವಾದ ಲೀಲಾವತಿಯಲ್ಲಿ ಮಧ್ಯೆ ಮಧ್ಯೆ ಪ್ರಾಕೃತ ಶ್ಲೋಕಗಳನ್ನೂ ಉಪಯೋಗಿಸುವುದರಿಂದ ಅವನಿಗಿಂತ ಹಿಂದೆ ಇದ್ದ ಈ ಪ್ರಾಕೃತ ಲೀಲಾವತಿ ಕತೆಯು ಅವನಿಗೆ ಯಥೋಚಿತವಾಗಿ ಪರಿಚಿತವಾಗಿದ್ದು ಅವನ ಗ್ರಂಥದ ಮೇಲೆ ಅಲ್ಪ ಸ್ವಲ್ಪ ಪರಿಣಾಮಕಾರಿಯಾಗಿರಬಹುದು.

ನೇಮಿಚಂದ್ರನ ಲೀಲಾವತಿಯಲ್ಲಿ ಅಲ್ಲಲ್ಲಿ ಕೆಲವು ರಸ ಸ್ಥಾನಗಳಿವೆ. ಆತನು ಹೇಳಿರುವಂತೆ ಅದನ್ನೂ ಅದರ ಕವಿಯನ್ನೂ ಅವನ ಕಾಲದವರು ಮೆಚ್ಚಿ ಹೊಗಳಿರುವುದಲ್ಲದೆ ಮುಂದೆ ಬಂದ ಕವಿಗಳೂ ಬಾಯಿತುಂಬ ಕೊಂಡಾಡಿದ್ದಾರೆ.

ಸುಮನೋಧರ್ಮ ಗುಣಂಗಳೊಳ್ + ಅಮು[1]ರ್ದ + ಅಮರ್ದಂ
ಕಱೆವ[1] ನೇಮಿಚಂದ್ರನಬಾಣಂ
ಭ್ರಮರಹಿತಂ ಮೃದುಹೃದಯಂಗೆ + ಅಮಮೆ ನಿಪುದು +
ಇದಾವ ಕೌತುಕಂ ಬುಧಜನದಾ ।

ಎಂದು ಪಾರ್ಶ್ವನು ಹೊಗಳಿದ್ದಾನೆ. 'ಶಾಸ್ತ್ರಲೌಕಿಕ ಕಲೆಯೊಳ್ ಜೇರ್ವರಿದ ನೇಮಿಜನ್ನರೆ ಕರ್ಣಾಟಕೃತಿಗೆ ಸೀಮಾಪುರುಷರ್' ಎಂಬುದು ಮಧುರನ ಮೆಚ್ಚಿಗೆಯ ಮಾತು. 'ಶೃಂಗಾರಕಾವ್ಯ ಲೀಲಾವತಿಯನು ಪೇಳ್ದಾಂಗಿಕನೇಮಿಯ ನೆನೆವೆ' ಎಂದು ಮಂಗರಸನೂ ಮಣಿದಿದ್ದಾನೆ. ದೊಡ್ಡಯ್ಯ, ಬಾಹುಬಲಿ, ದೇವಚಂದ್ರರು ಕಾದಂಬರಿಯನ್ನು ಸುಡಿಸಿ

---

1 ಸೇರಿಕೊಂಡು ಅಮೃತವನ್ನು ಕರೆಯುತ್ತಿರುವ.

ಲೀಲಾವತಿಗೆ ಕಪ್ಪಿಡಿಸಿದ ಸನ್ನಿವೇಶಗಳನ್ನು (ನಂಬುವುದು ಕಷ್ಟವಾಗಿದ್ದರೂ) ಏಕಕಂಠದಿಂದ ನುಡಿದಿದ್ದಾರೆ. ಇಷ್ಟಾದರೂ ಲೀಲಾವತಿಯನ್ನು ಓದಿದ ಮೇಲೆ ನೇಮಿಚಂದ್ರನಿಗೆ ಉಚ್ಚ ಕಾವ್ಯದೃಷ್ಟಿಯಿಂದ ಅಗ್ರಸ್ಥಾನವನ್ನು ಕೊಡಲಾಗುವುದಿಲ್ಲ. ಅವನ ಪ್ರಧಾನಧ್ಯೇಯವಾದ ಶೃಂಗಾರರಸ ಪ್ರತಿಪಾದನೆಯೇ ಉಚ್ಚ ಮಟ್ಟಕ್ಕೇರಿಲ್ಲ. ಹೃದಯದ ಮಿಡಿತಕ್ಕಿಂತ, ಭಾವನಾ ನಾಡಿಗಳ ಸ್ಪಂದನಕ್ಕಿಂತ ಬಾಹ್ಯವೂ ಚಾಕ್ಷುಷವೂ ಆದ ದೈಹಿಕವರ್ಣನೆಗೆ ಪ್ರಾಮುಖ್ಯತೆಯುಂಟಾಗಿದೆ. ವ್ಯಂಗ್ಯಕ್ಕಿಂತ ವಾಚ್ಯವು ಹೆಚ್ಚು ಪುರಸ್ಕೃತವಾಗಿದೆ. ಸ್ವಚ್ಛವಾದ ನಾಗರಿಕವಾದ ಸಂಕೋಚವನ್ನುಂಟುಮಾಡದಿರುವ ಶೃಂಗಾರವರ್ಣನೆ ಅಲ್ಲಿಲ್ಲ. ಕೃತಕವೂ ಅನೇಕ ಕಡೆ ನೀರಸವೂ ಆದ ವರ್ಣನೆಗಳಿಂದ ಕಥಾಸೂತ್ರವೇ ಮರೆಯಾಗಿ ಹೋಗುತ್ತದೆ. ಕಥಾಸಂವಿಧಾನದಲ್ಲಿಯೂ ಅದ್ಭುತವಾದ ಸನ್ನಿವೇಶಗಳ ಚಿತ್ರಣವಿಲ್ಲ. ವ್ಯಕ್ತಿಗಳಂತೂ ಬಹು ಸಪ್ಪೆ. ನಾಯಕ ನಾಯಿಕೆಯರು ತಮ್ಮ ಸ್ವಂತ ಭಾವನಾತರಂಗಗಳಿಂದಲೂ ಕ್ರಿಯೆಗಳಿಂದಲೂ ವಾಚಕರನ್ನು ಆಕರ್ಷಿಸುವಂತಿಲ್ಲ. ಗ್ರಂಥಕ್ಕೆ ಪ್ರಾಶಸ್ತ್ಯ ದೊರೆತಿರುವುದು ಅದು ಶೃಂಗಾರಕಾವ್ಯವಾಗಿರುವುದರಿಂದ ಮಾತ್ರ.

ಆದರೆ ಕನ್ನಡ ಸಾಹಿತ್ಯಚರಿತ್ರೆಯ ದೃಷ್ಟಿಯಿಂದ ಲೀಲಾವತಿಗೆ ಪ್ರತ್ಯೇಕ ಸ್ಥಾನವಿದೆ. ಅಖಂಡ ಹಳಗನ್ನಡ ಸಾಹಿತ್ಯದಲ್ಲಿ ನಾಲ್ಕೇ ಆದ (ಕಾದಂಬರಿ, ಲೀಲಾವತಿ, ಕುಸುಮಾವಳಿ, ದಶಕುಮಾರ ಚರಿತ್ರೆ) ಲೌಕಿಕ ಕಥಾಕಾವ್ಯಗಳಲ್ಲಿ ಇದೂ ಒಂದಾಗಿರುವುದರಿಂದ ಇದಕ್ಕೆ ಗಣ್ಯತೆಯುಂಟು.

## ನೇಮಿನಾಥ ಪುರಾಣ

ನೇಮಿಚಂದ್ರನ ಮತ್ತೊಂದು ಗ್ರಂಥ ನೇಮಿನಾಥಪುರಾಣ. ಇದು ೨೨ನೆಯ ತೀರ್ಥಂಕರನಾದ ನೇಮಿನಾಥನ ಚರಿತೆ. ಇದರಲ್ಲಿ ಜಿನವಂಶ, ಹರಿವಂಶ, ಕುರುವಂಶಗಳ ಚರಿತ್ರೆಗಳು ಉಕ್ತವಾಗಿವೆ. ಅಂದರೆ ಜಿನನ ಪೂರ್ವಭವಾವಳಿ ಮತ್ತು ಪಂಚ ಕಲ್ಯಾಣಗಳ ವಿವರಣೆಗಳೊಂದಿಗೆ ಭಾರತ ಮತ್ತು ಭಾಗವತದ ಕತೆಗಳು ಮಿಳಿತವಾಗಿವೆ. ಇದು ಅರ್ಧಕ್ಕೆ ನಿಂತುಹೋಗಿರುವುದ ರಿಂದ ಅರ್ಧನೇಮಿಯೆಂದೂ ಪ್ರಸಿದ್ಧಿಯಾಗಿದೆ. ಹರಿವಂಶ ಪುರಾಣವೆಂಬುದು ಇದರ ಮತ್ತೊಂದು ಹೆಸರು.

ನೇಮಿನಾಥನ ಕಥೆಯು ಜೈನರಲ್ಲಿ ಬಹು ಜನಪ್ರಿಯವೂ ಆಕರ್ಷಕವೂ ಆದುದು. ಈ ಕಥೆಯು ನೇಮಿಚಂದ್ರನಿಗಿಂತ ಹಿಂದೆಯೂ ಅವನಾದ ಮೇಲೆಯೂ ಅನೇಕರಿಂದ ಬೇರೆ ಬೇರೆ ಭಾಷೆಗಳಲ್ಲಿ ರಚಿತವಾಗಿವೆ. ಕ್ರಿ.ಶ. ೭೮೩ರಲ್ಲಿ ಪುನ್ನಾಟ ಸಂಘದ ಒಂದನೆಯ ಜಿನಸೇನಾಚಾರ್ಯನು ೧೨೦೦೦ ಶ್ಲೋಕ ಪರಿಮಿತಿಯುಳ್ಳ ಹರಿವಂಶ ಪುರಾಣವನ್ನು ಸಂಸ್ಕೃತ ಭಾಷೆಯಲ್ಲಿ ರಚಿಸಿದನು. ಇವನಿಂದ ೧೧೫ ವರ್ಷಗಳಾದ ಮೇಲೆ ಗುಣ ಭದ್ರಾಚಾರ್ಯನು ತನ್ನ ಉತ್ತರ ಪುರಾಣದ ಭಾಗವಾಗಿ ಇದೇ ಕತೆಯನ್ನು ಸುಮಾರು ೧೫೫೦ ಶ್ಲೋಕಗಳಲ್ಲಿ ಸಂಗ್ರಹಿಸಿದ್ದಾನೆ. ಉಪಲಬ್ಧವಲ್ಲದ ಕವಿ ಪರಮೇಶ್ವರನ 'ವಾಗರ್ಥಸಂಗ್ರಹ'ವು ಇವೆರಡಕ್ಕೂ ಮೂಲವಿರಬೇಕೆಂದು ಊಹಿಸಲ್ಪಟ್ಟಿದೆ. ಸುಮಾರು ೧೧ನೆಯ ಶತಮಾನದಲ್ಲಿ ವಾಗ್ಭಟನು 'ನೇಮಿನಿರ್ವಾಣ ಕಾವ್ಯ' ವನ್ನು ರಚಿಸಿದ್ದಾನೆ. ಇದಕ್ಕೆ ೧೫ನೆಯ ಶತಮಾನದಲ್ಲಿದ್ದ ಜ್ಞಾನಭೂಷಣನ 'ನೇಮಿನಿರ್ವಾಣ ಕಾವ್ಯಪಂಚಿಕಾ' ಎಂಬ ಟೀಕೆಯಿದೆ. ಅಪಭ್ರಂಶ ಭಾಷೆಯಲ್ಲಿ ಸ್ವಯಂಭುಕೃತ 'ಹರಿ

ವಂಶ ಪುರಾಣ'ವೇ ಪ್ರಾಚೀನವಾದುದು. ಧವಲ (೧೦ನೆಯ ಶತಮಾನ), ಯಶಃಕೀರ್ತಿ (೧೪೬೨) ಇವರು ಇದೇ ಹೆಸರಿನ ಮತ್ತೆರಡು ಗ್ರಂಥಗಳನ್ನು ರಚಿಸಿದ್ದಾರೆ. ಹರಿಭದ್ರ (೧೧೫೯), ಅಮರಕೀರ್ತಿ (೧೧೯೦), ಲಕ್ಷ್ಮಣದೇವರು (ಸು. ೧೪೫೦ಕ್ಕಿಂತ ಹಿಂದೆ) ಇದೇ ವಿಷಯಕವಾದ 'ಣೇಮಿಣಾಹಚರಿಉ' ಎಂಬ ಗ್ರಂಥಗಳನ್ನು ಬರೆದಿದ್ದಾರೆ. ಕನ್ನಡದಲ್ಲಿಯೂ ಈ ವಿಷಯಕ ವಾದ ಗ್ರಂಥಗಳಿಗೆ ಕೊರತೆಯೇನೂ ಇಲ್ಲ. ಇವುಗಳಿಗೆಲ್ಲ ಸಾಮಾನ್ಯವಾಗಿ ಒಂದನೆಯ ಜಿನಸೇನನ ಹರಿವಂಶಪುರಾಣವೇ ಮೂಲವಿರಬೇಕು. ಕನ್ನಡ ನೇಮಿನಾಥ ಚರಿತ್ರೆಗಳಲ್ಲಿ ಒಂದ ನೆಯ ಗುಣವರ್ಮನ (ಸು. ೯೦೦) 'ಹರಿವಂಶ'ವೇ ಪ್ರಾಚೀನ ವಾದುದು. ಈ ಗ್ರಂಥವು ಉಪಲಬ್ಧವಲ್ಲ. ಹತ್ತನೆಯ ಶತ ಮಾನಾಂತ್ಯದಲ್ಲಿ ಚಾವುಂಡರಾಯನು ತನ್ನ 'ತ್ರಿಷಷ್ಟಿಶಲಾಕಾ ಪುರುಷ ಪುರಾಣ'ದ ಭಾಗವಾಗಿ ನೇಮಿತೀರ್ಥಂಕರ ಚರಿತೆ ಯನ್ನು ಗದ್ಯದಲ್ಲಿ ರಚಿಸಿದ್ದಾನೆ. ಸು. ೧೧೪೦ರಲ್ಲಿ ಕರ್ಣಪಾರ್ಯ ನಿಂದ 'ನೇಮಿನಾಥಪುರಾಣವೊಂದು' ಚಂಪೂ ರೀತಿಯಲ್ಲಿ ರಚಿತವಾಗಿದೆ. ನೇಮಿಚಂದ್ರನಾದ ಮೇಲೆ ರಚಿತವಾದ ಬಂಧು ವರ್ಮನ (ಸು. ೧೨೦೦) 'ಹರಿವಂಶಾಭ್ಯುದಯ'ವೂ, ಮಹಾಬಲ ಕವಿಯ (ಸು. ೧೨೫೪) 'ನೇಮಿನಾಥಪುರಾಣ'ವೂ, ಮಂಗರಸ (೧೫೦೮) 'ನೇಮಿಜಿನೇಶಸಂಗತಿ'ಯೂ ಇದೇ ವಿಷಯಕವಾದ ಗ್ರಂಥಗಳು.

ಜೈನರು ವೈದಿಕ ಕತೆಗಳನ್ನು ಮಾರ್ಪಡಿಸಿಕೊಂಡಿರು ವಂತೆಯೇ ಇತಿಹಾಸಗಳಾದ ರಾಮಾಯಣ ಮಹಾಭಾರತ ಗಳನ್ನು ತಮ್ಮ ಧರ್ಮಕ್ಕೆ ಸಮನ್ವಯವಾಗುವಂತೆ ಅಳವಡಿಸಿ ಕೊಂಡಿದ್ದಾರೆ. ಜೈನಧರ್ಮದ ಪ್ರಧಾನ ಭಾಗವಾದ ಪಂಚಾಣು

ವ್ರತಗಳಿಗೆ ಹೊಂದಿಕೊಳ್ಳುವಂತೆ ಮಾರ್ಪಡಿಸಿ ಪವಾಡ ಅಥವಾ ಐತಿಹ್ಯಭಾಗಗಳನ್ನೆಲ್ಲಾ ಕಾರ್ಯಕಾರಣಗಳಿಂದ ಸಜ್ಜು ಗೊಳಿಸಿದ್ದಾರೆ. ನೇಮಿನಾಥಪುರಾಣವು ಮಹಾಭಾರತದ ಜೈನ ಸಂಪ್ರದಾಯವನ್ನು ತೋರಿಸಿಕೊಡಲು ಬಹಳ ಸಹಾಯಕ ವಾಗಿದೆ.

ನೇಮಿಚಂದ್ರನು ತನ್ನ ನೇಮಿನಾಥಪುರಾಣದಲ್ಲಿ ಜಿನಕತೆ ಯೊಡನೆ ವಸುದೇವಾಚ್ಯುತಕಂದರ್ಪರ ಕತೆಗಳನ್ನು ಸಮಾವೇಶ ಗೊಳಿಸಿ ಹೇಳಿದ್ದಾನೆ. ಇದರ ಆದಿಭಾಗದಲ್ಲಿ ನೇಮಿತೀರ್ಥಂಕರನ ಪೂರ್ವಭವಾವಳಿಗಳಾದ ವಿಂಧ್ಯಕಶಬರ ಇಭ್ಯಕೇತು, ಸೌಧರ್ಮ ಕಲ್ಪಜ, ಚಿಂತಾಗತಿಖಚರ, ಮಹೇಂದ್ರ ಕಲ್ಪಜ, ಅಪರಾಜಿತ, ಅಚ್ಯುತೇಂದ್ರ, ಸುಪ್ರತಿಷ್ಠ, ಪಂಚಾಣುತ್ತರಾಹಮಿಂದ್ರರ ವಿಷಯಗಳು ಸಂಗ್ರಹವಾಗಿಯೂ ಸ್ವಾರಸ್ಯವಾಗಿಯೂ ಉಕ್ತ ವಾಗಿವೆ. ಮುಂದೆ ಹರಿವಂಶ ಕುರುವಂಶಗಳ ಉತ್ಪತ್ತಿ, ವಸುದೇವ ಪ್ರತಾಪ ವರ್ಣನೆ, ವಾಸುದೇವ ಜನನ, ಬಾಲಲೀಲಾವರ್ಣನ, ಕಂಸವಧಾಂತವಾಗಿ ಕಾವ್ಯವು ನಿಂತುಹೋಗಿದೆ. ಬಹುಶಃ ಗ್ರಂಥ ಪೂರ್ಣವಾಗುವುದರೊಳಗೆ ಕವಿ ತೀರಿಕೊಂಡನೋ ಏನೊ.

ಪ್ರಸಕ್ತವಾದ ನೇಮಿನಾಥ ಪುರಾಣವು ಜಿನಸೇನ, ಗುಣ ಭದ್ರಾಚಾರ್ಯರ ಕತೆಯುಂತೆಯೇ ಅಪರಾಜಿತನ ಕತೆಯಿಂದ ಪ್ರಾರಂಭವಾಗುತ್ತದೆ. (ಕರ್ಣಾಪಾರ್ಯನು ಮಾತ್ರ ಇಭ್ಯಕೇತು ವಿನ ಕತೆಯಿಂದ ಆರಂಭಿಸುತ್ತಾನೆ.) ಅಲ್ಲಿ ಬರುವ ಕಥಾ ಭಾಗವನ್ನು ಈ ರೀತಿ ಸಂಗ್ರಹಿಸಬಹುದು : ಸುಗಂಧಿಲ ದೇಶದ ಸಿಂಹಪುರದ ದೊರೆ ಅರ್ಹದ್ದಾಸ. ಆತನ ಪತ್ನಿ ಜಿನದತ್ತೆ. ಇವರಿಬ್ಬರಿಗೂ ಹಲವು ವ್ರತಗಳ ಫಲವಾಗಿ ಅಪರಾಜಿತನೆಂಬ

ಪುತ್ರನು ಜನಿಸಿದನು. ಅರ್ಹದ್ದಾಸನು ಮಗನು ಪ್ರಾಪ್ತವಯಸ್ಕ ನಾದಮೇಲೆ ಒಂದು ದಿನ ತನ್ನ ಊರ ಹೊರಗಣ ಉದ್ಯಾನದಲ್ಲಿ ವಿಮಲವಾಹಕ ಭಟ್ಟಾರಕರ ಸಮವಸರಣಕ್ಕೆ ವಂದಿಸಲು ಹೋಗಿ ದ್ದಾಗ ಧರ್ಮವನ್ನು ಕೇಳಿ ವೈರಾಗ್ಯಪರನಾಗಿ ಮಗನಲ್ಲಿ ರಾಜ್ಯ ವನ್ನಿರಿಸಿ ಜಿನದೀಕ್ಷೆಗೊಂಡು ಸತ್ತು ಮೋಕ್ಷವನ್ನೈದಿದನು. ಇದನ್ನು ಕೇಳಿದ ಅಪರಾಜಿತನು ತಂದೆಯನ್ನು ನೋಡಿದಲ್ಲದೆ ಊಟಮಾಡುವುದಿಲ್ಲವೆಂದು ಹಟಹಿಡಿಯಲಾಗಿ ದೇವೇಂದ್ರನು ಹೆದರಿ ಕುಬೇರನ ಮೂಲಕ ಕೃತಕವಾದ ರೀತಿಯಲ್ಲಿ ಅರ್ಹದ್ದಾಸ ನನ್ನು ತೋರಿಸಿದನು. ತೃಪ್ತಿಗೊಂಡ ಅಪರಾಜಿತನು ಸುಖವಾಗಿ ಕಾಲ ಕಳೆಯುತ್ತಿರಲು ಒಂದು ದಿನ ಜಿನಭವನದಲ್ಲಿ ಜಿನಬಿಂಬ ವನ್ನು ಪೂಜಿಸುತ್ತಿರುವಾಗ ಅಲ್ಲಿಗೆ ಬಂದ ಚಾರಣಯುಗವನ್ನು ಕಂಡು ನನಗೆ ನೀವು ಪರಿಚಿತರಂತಿದೆ, ನನ್ನ ನಿಮ್ಮ ಸಂಬಂಧವನ್ನು ತಿಳಿಸಿ ಎಂದು ಕೇಳಿಕೊಳ್ಳಲು ಅವರಲ್ಲಿ ಹಿರಿಯ ಮುನಿಗಳು ಈ ರೀತಿ ಹೇಳಿದರು:

‘ಗಂಧಿಲ ದೇಶದಲ್ಲಿ ಸೂರ್ಯಪ್ರಭಪುರದರಸು ಸೂರ್ಯ ಪ್ರಭ. ಆತನ ಪ್ರಾಣಪ್ರಿಯೆ ಧಾರಿಣಿ. ಅವರಿಗೆ ಚಿಂತಾಗತಿ, ಮನೋಗತಿ, ಚಪಲಗತಿಗಳೆಂಬ ಮೂರು ಮಕ್ಕಳಾದರು. ಅತ್ತ ದಕ್ಷಿಣ ಶ್ರೇಣಿಯ ಅರಿಂದಮಪುರದರಸು ಅರಿಂಜಯ. ಅವನ ಗೃಹಿಣಿ ಅಜಿತಸೇನಾದೇವಿ. ಅವರ ಮಗಳು ಪ್ರೀತಿಮತಿ. ಅವಳ ಸ್ವಯಂವರಕ್ಕಾಗಿ ಮಂದರಪರ್ವತದಲ್ಲಿ ಗಗನಗಮನ ವಿಜಯ ಸ್ಪರ್ಧೆಯನ್ನೇರ್ಪಡಿಸಿದ್ದರು. ಮನೋಗತಿಯೂ ಚಪಲ ಗತಿಯೂ ಆ ಸ್ಪರ್ಧೆಯಲ್ಲಿ ಸೋಲಲು ಚಿಂತಾಗತಿಯು ಆಕೆಯನ್ನು ಗೆದ್ದು ತಮ್ಮಂದಿರಲ್ಲಿ ಒಬ್ಬರನ್ನು ಮದುವೆ ಯಾಗೆಂದು ಹೇಳಿದನು. ಅವಳು ಅದಕ್ಕೆ ತನ್ನನ್ನು ಗೆದ್ದವನ

ನ್ನಲ್ಲದೆ ಅನ್ಯರಲ್ಲಿ ಮನಸ್ಸು ಮಾಡುವುದಿಲ್ಲವೆಂದು ಹೇಳಿ ನಿರ್ವೇಗಪರಳಾಗಿ ಜಿನದೀಕ್ಷೆಗೊಂಡಳು. ಚಿಂತಾಗತಿಯೂ ಜಿನದೀಕ್ಷೆಗೊಂಡು ಜೀವಿತಾಂತ್ಯದಲ್ಲಿ ಮಹೇಂದ್ರಕಲ್ಪದಲ್ಲಿ ಸಾಮಾನಿಕದೇವನಾಗಿ ಹುಟ್ಟಿ ಅನೇಕ ಕಾಲ ಸುಖವಾಗಿದ್ದು ಈಗ ಅಪರಾಜಿತನಾಗಿದ್ದೀಯೆ. ಚಪಳಗತಿ ಮನೋಗತಿ ಗಳಾಗಿದ್ದ ನಾವೂ ನಿರ್ವೇಗಪರರಾಗಿ ಜಿನದೀಕ್ಷೆಗೊಂಡು ಸತ್ತು ಗಗನವಲ್ಲಭಪುರದ ಗಗನಚಂದ್ರ ಮಹಾರಾಜನಿಗೂ ಗಗನಸುಂದರಿಗೂ ಅಮಿತಗಾಮಿ ಅಮಿತತೇಜ ಎಂಬ ಮಕ್ಕ ಳಾಗಿ ಹುಟ್ಟಿ ಪುಂಡರೀಕಿಣಿಯಲ್ಲಿ ಸ್ವಯಂಪ್ರಭ ತೀರ್ಥಂಕರ ರಿಂದ ನಿನ್ನ ಇರವನ್ನು ತಿಳಿದು ನಿನ್ನನ್ನು ನೋಡಲು ಬಂದಿ ದ್ದೇವೆ ಎಂದು ಹೇಳಿ ತಮ್ಮ ಹಿಂದಿನ ವಿಂಧ್ಯಕ—ವಾಗುರೆ, ಇಭ್ಯಕೇತು–ಕಮಳಪ್ರಭೆ, ಶ್ರೀದೇವ–ವಿಮಳಪ್ರಭೆ ಮೊದಲಾದ ಕಳೆದುಹೋದ ಭವಪಂಚಕಗಳನ್ನು ತಿಳಿಸಿ ಅಪರಾಜಿತನಿಗೆ ಇನ್ನು ಒಂದು ತಿಂಗಳು ಮಾತ್ರ ಆಯುಷ್ಯವೆಂದೂ ಅದರೊಳಗೆ ಪರಲೋಕ ಹಿತವನ್ನು ಮಾಡಿಕೊಳ್ಳಬೇಕೆಂದೂ ತಿಳಿಸಲಾಗಿ ಅಪರಾಜಿತನು ಅವರ ಉಪಕಾರವನ್ನು ಕೊಂಡಾಡಿ ತನ್ನ ಮಗ ಪ್ರೀತಂಕರನಿಗೆ ರಾಜ್ಯವನ್ನಿತ್ತು ತಪಸ್ಸುಮಾಡಿ ಸಂನ್ಯಸನ ದಿಂದ ಸತ್ತು ಸಾಂತರವಿಮಾನದಲ್ಲಿ ಅಚ್ಯುತೇಂದ್ರನಾಗಿದ್ದು ತದಾಯುರವಸಾನದಲ್ಲಿ ಹಸ್ತಿನಾಪುರದ ಚಂದ್ರನಿಗೂ ಶ್ರೀಮತಿಗೂ ಪ್ರತಿಷ್ಠನೆಂಬ ಮಗನಾಗಿ ಹುಟ್ಟಿ ಯಶೋಧರ ಮುನಿಗಾಹಾರದಾನಮಾಡಿ ಪಂಚಾಶ್ಚರ್ಯವನ್ನು ಪಡೆದು ಒಂದುದಿನ ದಿಗವಲೋಕನ ಸಂದರ್ಭದಲ್ಲಿ ಉಲ್ಕಾಪಾತವನ್ನು ನೋಡಿ ವಿರಕ್ತನಾಗಿ ಸುದೃಷ್ಟಿಯೆಂಬ ಮಗನಿಗೆ ರಾಜ್ಯವಿತ್ತು ಸುಮಂದರ ಮುನಿಗಳ ಪಕ್ಕದಲ್ಲಿ ದೀಕ್ಷೆಗೊಂಡು ಸಂನ್ಯಸನದಿಂದ

ಸತ್ತು ಜಯಂತ ವಿಮಾನದಲ್ಲಿ ಅಹಮಿಂದ್ರನಾದನು. ಇವನೇ ಮುಂದೆ ಹರಿವಂಶದ ಸಮುದ್ರವಿಜಯನಿಗೆ ಮಗನಾಗಿ ನೇಮಿನಾಥನಾಗಿ ಜನಿಸುವವನು.

ಇತ್ತ ಭರತಕ್ಷೇತ್ರದ ಕೃತಾರ್ಥವೆಂಬ ವಿಷಯದಲ್ಲಿ ಶೌರ್ಯಪುರವೆಂಬ ನಗರವುಂಟು. ಅದರರಸು ಶೂರಸೇನ. ಆತನ ಮಗ ಶೂರವೀರ. ಆತನ ಹೆಂಡತಿ ಧಾರಿಣಿ (ವಾರಿಣಿ ?). ಅವರಿಬ್ಬರಿಗೂ ಅಂಧಕವೃಷ್ಟಿ ನರವೃಷ್ಟಿ ಎಂಬ ಇಬ್ಬರು ಮಕ್ಕಳು. ಇವರಲ್ಲಿ ಅಂಧಕವೃಷ್ಟಿಗೆ ಸುಭದ್ರೆಯೆಂಬುವಳರಸಿ. ಇವರಿಗೆ ಸಮುದ್ರವಿಜಯನೇ ಮೊದಲಾದ ಹತ್ತು ಮಂದಿ ಪುತ್ರರೂ ಕೊಂತಿ ಮಾದ್ರಿಯೆಂಬ ಪುತ್ರಿಯರೂ ಆದರು. ಪುತ್ರರಲ್ಲಿ ವಸುದೇವನೇ ಕೊನೆಯವನು. ವಸುದೇವನು ಹೊರತು ಉಳಿದ ರಾಜಕುಮಾರರು ಶಿವದೇವಿಯೇ ಮೊದಲಾದ ಪ್ರೇಯಸಿಯರೊಡನೆ ಸುಖವಾಗಿರುತ್ತಿದ್ದರು. ನರವೃಷ್ಟಿಯ ಮನಃಪ್ರಿಯೆ ಪದ್ಮಾವತಿ. ಅವರಿಗೆ ಉಗ್ರಸೇನ, ಮಹಾಸೇನ, ದೇವಸೇನರೆಂಬ ಗಂಡು ಮಕ್ಕಳೂ ಗಾಂಧಾರಿಯೆಂಬ ಹೆಣ್ಣುಮಗಳೂ ಆದರು.

ಅತ್ತ ಕುರುವಂಶದ ಶವಕಿ(?)ಯೆಂಬರಸನಿಗೆ ಪರಾಶರನೆಂಬುವನು ಮಗ. ಈತನಿಗೂ ಮತ್ಸ್ಯಕುಲಜಾತೆಯಾದ ಸತ್ಯವತಿಗೂ ಯಶೋವಲ್ಲಭನಾದ ವ್ಯಾಸನು ಹುಟ್ಟಿದನು. ಪರಾಶರಸುತನಾದ ವ್ಯಾಸನಿಗೂ ಸುಭದ್ರೆಗೂ ಧೃತರಾಷ್ಟ್ರ ಪಾಂಡು ವಿದುರರು ಮಕ್ಕಳಾದರು. ಪಾಂಡುವಿಗೆ ಕುಂತಿಯ ರೂಪುಲಾವಣ್ಯಗಳನ್ನು ನೋಡಿ ಮೋಹವುಂಟಾಯಿತು. ವಿರಹವೇದನೆಯನ್ನನುಭವಿಸಲಾರದೆ ವಸಂತವಾಸಂತವೆಂಬುದ್ಯಾನಭವನದಲ್ಲಿರಲು ಆ ವನದ ಸೊಬಗಿಗೆ ಮಾರುಹೋಗಿ ವಜ್ರ

ಮಾಳಿಯೆಂಬ ವಿದ್ಯಾಧರನು ತನ್ನ ಮನಃಪ್ರಿಯೆ ಮನೋಹರಿ ಎಂಬುವಳೊಡನೆ ವನವಿಹಾರಕ್ಕೆ ಬಂದು ವನವಿಹಾರವಾದ ಮೇಲೆ ತನ್ನ ಕಾಮಮುದ್ರಿಕೆಯನ್ನು ಮರೆತುಹೋದನು. ಅದು ಪಾಂಡುರಾಜನಿಗೆ ಸಿಕ್ಕಿತು. ಅದನ್ನು ಹುಡುಕಿಕೊಂಡು ಹಿಂದಕ್ಕೆ ಬಂದ ವಿದ್ಯಾಧರನಿಂದ ಅದು ಕಾಮರೂಪಸಾಧನ ವೆಂದು ತಿಳಿದು ಪಾಂಡುವು ತನ್ನ ಇಷ್ಟಾರ್ಥ ಸಾಧನೆಯಾಗುವ ವರೆಗೆ ತನ್ನಲ್ಲಿಯೇ ಇರಲು ಅವಕಾಶವನ್ನು ಪಡೆದು ಅದರ ಸಹಾಯದಿಂದ ತನ್ನ ಮನದನ್ನೆಯಾದ ಕುಂತಿಯ ಅಂತಃ ಪುರಕ್ಕೆ ಹೋಗಿ ಅವಳಿಗೆ ತನ್ನ ನಿಜಸ್ವರೂಪವನ್ನು ತೋರಿಸಿ ಅವಳಲ್ಲಿ ಸಂಸರ್ಗಮಾಡಿದನು. ಆಕೆಯು ಗರ್ಭವನ್ನು ತಳೆದು ಮಗನನ್ನು ಹೆತ್ತಳು. ಕನ್ಯಾವಸ್ಥೆಯಲ್ಲಿಯೇ ಆ ಮಗನನ್ನು ಪಡೆದುದರಿಂದ ತನ್ನಲ್ಲಿ ಇರಿಸಿಕೊಳ್ಳುವುದು ಉಚಿತವಲ್ಲವೆಂದು ಮಗುವನ್ನು ಪೊನ್ನ ಮಂದಸಿನಲ್ಲಿಟ್ಟು ಸಖಿಯರ ಮೂಲಕ ಯಮುನೆಯಲ್ಲಿ ಬಿಡಿಸಿದಳು. ಅದನ್ನು ಚಂಪಾನಗರದ ಆದಿತ್ಯ ನೆಂಬರಸನು ನೋಡಿ ಪೆಟ್ಟಿಗೆಯಲ್ಲಿದ್ದ ಆ ಮಗುವನ್ನು ತನ್ನರಸಿ ರಾಧೆಯೆಂಬವಳಿಗೆ ಕೊಟ್ಟನು. ಆ ಮಗುವು ರಾಧೆಯ ಕಿವಿ ಯನ್ನು ಮುಟ್ಟಿದುದರಿಂದ ಅದಕ್ಕೆ ಕರ್ಣನೆಂದು ಹೆಸರಾಯಿತು. ಆತನು ಬಹು ಶೌರ್ಯದಿಂದಲೂ ಔದಾರ್ಯದಿಂದಲೂ ಬೆಳೆಯು ತ್ತಿದ್ದನು.

ಕುಂತಿಗೆ ಪಾಂಡುರಾಜನಲ್ಲಿ ಮೋಹವು ವೃದ್ಧಿಯಾಗುತ್ತಿರು ವುದನ್ನು ಅಂಧಕವೃಷ್ಟಿ ತಿಳಿದು ಅವಳನ್ನೂ ಮಾದ್ರಿಯನ್ನೂ ಪಾಂಡುರಾಜನಿಗೆ ಧಾರೆಯೆರೆದನು. ಅವರಿಗೆ ಧರ್ಮರಾಜ, ಭೀಮ, ಅರ್ಜುನ, ನಕುಲ, ಸಹದೇವರೆಂಬ ಮಕ್ಕಳಾದರು. ಹಾಗೆಯೆ ನರಪತಿವೃಷ್ಟಿಯೂ ತನ್ನ ಮಗಳು ಗಾಂಧಾರಿಯನ್ನು

ಧೃತರಾಷ್ಟ್ರನಿಗೆ ಕೊಟ್ಟು ಮದುವೆಮಾಡಿದನು. ಅವರಿಗೆ ದುರ್ಯೋಧನ, ದುಶ್ಶಾಸನ ಮೊದಲಾದ ನೂರು ಮಕ್ಕಳಾದರು. ಒಂದು ದಿನ ಶೂರವೀರನು ಗಂಧಮಾದನ ಗಿರಿಯಲ್ಲಿ ಸುಪ್ರತಿಷ್ಠ ಮುನಿವರರಲ್ಲಿ ಧರ್ಮವನ್ನು ಕೇಳಿ ಅಂಧಕವೃಷ್ಟಿಗೆ ರಾಜ್ಯವಿತ್ತು ದೀಕ್ಷೆಗೊಂಡನು. ಮತ್ತೆ ಹನ್ನೆರಡು ವರುಷಗಳಾದ ಮೇಲೆ ಸುಪ್ರತಿಷ್ಠ ಮುನಿಗಳು ಪ್ರತಿಮಾಯೋಗದಲ್ಲಿರಲು ಸುದರ್ಶನ ನೆಂಬ ದೇವನು ಅಲ್ಲಿಗೆ ಬಂದು ಉಪಸರ್ಗಮಾಡಿದನು. ಅದನ್ನು ಸಹಿಸಿಕೊಂಡು ಸುಪ್ರತಿಷ್ಠ ಮುನಿಗಳು ತಪಸ್ಸುಮಾಡಿ ಕೇವಲಿ ಗಳಾದರು. ಆಗ ಇತರರೊಡನೆ ಪೂಜೆಗೆ ಹೋಗಿದ್ದ ಅಂಧಕ ವೃಷ್ಟಿಯು ಸುದರ್ಶನನ ಉಪಸರ್ಗಕ್ಕೆ ಕಾರಣವನ್ನು ತಿಳಿದು ವೈರಾಗ್ಯವನ್ನು ತಾಳಿ ತನ್ನ ಮಗನಾದ ಸಮುದ್ರವಿಜಯನಿಗೆ ರಾಜ್ಯವನ್ನಿತ್ತು ತಪಸ್ಸುಮಾಡಿ ಮೋಕ್ಷವನ್ನು ಪಡೆದನು.

ಸಮುದ್ರವಿಜಯನು ದಿಕ್ಪಾಲಕರಂತಿರುವ ತನ್ನ ಎಂಟು ಜನ ತಮ್ಮಂದಿರೊಡನೆ ಸುಖವಾಗಿ ರಾಜ್ಯವಾಳುತ್ತಿರಲಾಗಿ ಅವನ ಕಿರುತಮ್ಮನಾದ ವಸುದೇವನು ತನ್ನ ರೂಪು ಲಾವಣ್ಯಗಳಿಂದ ಧರೆಗೆ ಕಣ್ಣುಮುಳ್ಳಾದನು. ಅವನು ಪ್ರತಿದಿನವೂ ಆತ್ಮಸಂತೋಷ ಕ್ಕಾಗಿ ಪುರವೀಧಿಗಳಲ್ಲಿ ವಿಹಾರಯಾತ್ರೆಯನ್ನು ಮಾಡುತ್ತಿರಲಾಗಿ 'ಆ ರತಿರತ್ನಮೋರುಗೆ ಮರುಳ್ಗೊಂಡಿರ್ದರಬ್ಜಾಕ್ಷಿಯರ್'

ಶ್ರೀಯುಂ ಸರಸತಿಯುಂ [1]ಜಯ
ಜಾಯೆ[1] ಯೆನಾ ವೀರಲಕ್ಷ್ಮಿಯುಂ[1] ಜಸವೆಣ್ಣುಂ

---

[1] ಜಯಲಕ್ಷ್ಮಿ.

ಜ್ಯಾಯನೆಱಗಿಸಿದ ನೀಱಂ
ಪ್ರಿಯರನೇಱಗಿಸುವುದರಿದೆ ಮನುಜಮನೋಜಂ

ಆತನು ಬೀದಿಯಲ್ಲಿ ಹೊರಟತಕ್ಷಣವೆ 'ಪೊೞಲೊಳುಳ್ಳ ಜಿಲವೆಂಡಿರುಂ ಕುಲವೆಂಡಿರುಂ ಕಾಪಟಿದು ಮರುಳ್ಗೊಂಡದಂ ಕಂಡು ಪೌರಜನವೆಲ್ಲ ಸಮುದ್ರವಿಜಯನಲ್ಲಿಗೆ ಹೋಗಿ ಮೊರೆಯಿಡಲು ಆವನು ಅವರು ತಂದಿದ್ದ ಮಕ್ಕಳೆಲ್ಲವೂ ವಸುದೇವನ ರೂಪಚಿತ್ರಮಂ ತಿದ್ದುದನ್ನು ಕಂಡು ಆಶ್ಚರ್ಯಭರಿತನಾಗಿ ಅವನನ್ನು ಹೊರಗೆಹೋಗದಂತೆ ಮಾಡಲಿಚ್ಛಿಸಿ ತಮ್ಮನನ್ನು ಒಳ್ಳೆಯ ಮಾತಿನಲ್ಲಿ ಹತ್ತಿರಕ್ಕೆ ಕರೆಯಿಸಿ, ಅನುಜ-ಇದೇಕೆ ನಿನ್ನ ಮೆಯ್ ಪೊಸೆದಪೂವಿನಂತಾದುದು ಆನಿದಂ ಬಗೆದೆನ್; ಆಡುವೊ ಬಿಸಿಲೊಳೀಗಳಬ್ಜೇಕ್ಷಣಾ?' ನೀರೊಳಂ ನೆೞಲೊಳಂ ಒಲ್ದಂತೆ ಮೊಲಿರ್ದು ಉಟ್ಟುಂ ತೊಟ್ಟುಂ ಸಂತಸದಿಂ ಪೂವಿನಂತೆ ಸುಖಮಿರಲಾಗಾ! ರಾಜಕುಮಾರರ್ ಆರ್ ಕಂಡರ್ ಆರ್ ಕೇಳ್ದರೆಂಬಂತಿರವೇೞ್ಕುಂ. ತಿಟ್ಟನೆ ತಿರಿದು ಬಟ್ಟಸಿರಿವಂದೊಡೆ ಮೆಯ್ಯ ಬಣ್ಣಂ ಪೋಕುಂ; ಲೋಕದ ಕಿಸುಱುಂ ಕಣ್ಣೆಂಜಲುಂ ಪತ್ತುಗುಂ; ಇನ್ನೆಂದುಂ ಮನೆಯ ಪೊಸಂತಿಲಂ ಪೊಱಮಡಲಾಗದು, ಈ ಕೃತಕಾಚಳದೊಳ್ ವನವಿಹಾರಮನೆಸಗು" ಎಂದು ಒಳ್ಳೆಯ ಮಾತಿನಿಂದಲೆ ಅವನನ್ನು ಅರಮನೆಯೊಳಗೆ ಬಂಧಿಸಿಟ್ಟನು. ವಸುದೇವನು ಅಣ್ಣನ ಮಾತನ್ನು ನಿಜವೆಂದೇ ನಂಬಿ ಅಲ್ಲಿ ಕೆಲಕಾಲವಿದ್ದು ಒಬ್ಬ ಚೇಟಿಕೆಯಿಂದ ತಾನು ಬಂಧಿತನಾಗಿರುವುದನ್ನು ತಿಳಿದು ದುಃಖಿಸಿ ರಾತ್ರಿ ತಾನಿದ್ದ ಕೊಟಡಿಯ ಗವಾಕ್ಷದಿಂದ ಇಳಿದು ಯಾರಿಗೂ ಗೊತ್ತಿಲ್ಲದಂತೆ ಶ್ಮಶಾನದ ಕಡೆ ಹೊರಟು ಅಲ್ಲಿ ಒಂದು ಪತ್ರವನ್ನು ಬರೆದು

ತನ್ನ ಆಭರಣಗಳನ್ನೆಲ್ಲ ಅದರೊಡಸಿಟ್ಟು ತಾನು ಹೋದ ಹೆಜ್ಜೆ ಯಾರಿಗೂ ಅರಿಯದಂತೆ ನಡೆದು ಹೊರಟುಹೋದನು. ಮಾರನೆಯ ದಿನ ಸಮುದ್ರವಿಜಯನು ಅದನ್ನರಿತು ತಮ್ಮನ ಸಾವಿಗೆ ಮರುಗುತ್ತಿರಲು ಅರಿತವರು 'ಅವನು ಸತ್ತಿಲ್ಲ, ಕೆಲವು ದಿವಸಗಳಲ್ಲಿಯೇ ನಿನ್ನಲ್ಲಿಗೆ ಬರುತ್ತಾನೆ' ಎಂದು ಸಮಾಧಾನ ಮಾಡಿದರು.

ಇತ್ತ ವಸುದೇವನು ಶ್ಮಶಾನದಿಂದ ವಿಜಯಖೇಟದ ಕಡೆ ಹೊರಟು ಅಲ್ಲಿಯ ವನದಲ್ಲಿ ತನಗಾಗಿಯೇ ಕಾಯುತ್ತಿದ್ದ ಮೃಗಧಾಧಿಪತಿಯ ಮಗಳಾದ ಶ್ಯಾಮಳೆ ಎಂಬುವಳನ್ನು ಮದುವೆ ನಿಂದು ಕೆಲವು ದಿನವಿರ್ದು ಅಲ್ಲಿಂದ ಹೊರಟು ಮುಂದೆ ಅರಣ್ಯದಲ್ಲಿ ನಡೆದು ಕುಸುಮಾಕರವೆಂಬ ಸರೋವರದ ಸಮೀಪ ದಲ್ಲಿ ಬಹು ಭೀಕರವಾಗಿದ್ದ ಆನೆಯ ಸೊಕ್ಕನ್ನಡಗಿಸಿ ನೀಲಂಪ ಪುರದರಸು ಅಶನಿವೇಗನ ಮಗಳಾದ ಶಾಲ್ಮಲಿದತ್ತೆಯನ್ನು ವರಿಸಿ ಸುಖವಾಗಿ ಕಾಲಕಳೆಯುವನು. ಒಂದು ದಿನ ಅವರಿಬ್ಬರು ಸುಖನಿದ್ರೆಯಲ್ಲಿರುವಾಗ ಪೂರ್ವಭವದ ದ್ವೇಷದಿಂದ ಖಚರ ನೊಬ್ಬನು ವಸುದೇವನನ್ನು ಸೆಳೆದುಯ್ಯಲು ಶಾಲ್ಮಲಿದತ್ತೆ ಅವನನ್ನು ಬೆನ್ನಟ್ಟಿಹೋಗಿ ಬಿಡಿಸಿಕೊಂಡು ಬರುತ್ತಾ ದಾರಿ ಯಲ್ಲಿ ಒಂದು ದಿವ್ಯಧ್ವನಿಯ ಆದೇಶದಂತೆ ವಸುದೇವನನ್ನು ಪರ್ಣಲಘು ವಿದ್ಯೆಯಿಂದ ಚಂಪಾಪುರದ ಹೊರಭಾಗದ ಉದ್ಯಾನದಲ್ಲಿರಿಸಿ ಹೋಗುವಳು. ವಸುದೇವನು ಅಲ್ಲಿ ಚಾರು ದತ್ತನ ಕೊರ್ಳ್‌ಮಗಳಾದ ಗಂಧರ್ವದತ್ತೆಯನ್ನು ವಿಷ್ಣುವಿನ ತ್ರಿವಿಕ್ರಮಾವತಾರದಲ್ಲಿ ಗಂಧರ್ವದೇವರು ಅನುಗ್ರಹಿಸಿದ್ದ ಧಾರಾವಿ ಸಾರಾರಿಯೆಂಬ ವೀಣೆಗಳ ವಂಶಕ್ಕೆ ಸೇರಿದ ವೀಣೆ ಗಳಿಂದ ವೈಣಿಕಸ್ವಯಂವರದಲ್ಲಿ ಗೆದ್ದು ಮದುವೆ ನಿಂದು

ಕೆಲಕಾಲ ಸುಖವಾಗಿದ್ದು ಅಲ್ಲಿಗೆ ಬಂದ ಭಟ್ಟರಿಬ್ಬರಿಂದ ರೋಹಿಣಿದೇವಿಯ ಸ್ವಯಂವರ ವಾರ್ತೆಯನ್ನರಿತು ಪರ್ಣಲಘು ವಿದ್ಯೆಯಿಂದ ಮಾಗಧಿಯೆಂಬ ನಗರಿಗೆ ತೆರಳುವನು. ಅಲ್ಲಿ ಸ್ವಯಂವರಮಂಟಪದಲ್ಲಿ ವಸುದೇವನು ಪಾಣವಿಕನ (ಮದ್ದಲೆಯುವನ) ವೇಷದಲ್ಲಿ ರೋಹಿಣಿಯನ್ನು ಗೆಲ್ಲುವನು. ಅಸೂಯೆಯಿಂದ ಮೇಲೆ ಬಿದ್ದ ರಾಜರುಗಳನ್ನೂ ತಿಳಿಯದೆ ತನ್ನ ಮೇಲೆ ಯುದ್ಧಮಾಡಿದ ತನ್ನ ಅಣ್ಣನಾದ ಸಮುದ್ರ ವಿಜಯನನ್ನೂ ಸೋಲಿಸಿ ತನ್ನನ್ನು ಪರಿಚಯ ಮಾಡಿಕೊಂಡು ಸಮುದ್ರವಿಜಯನ ಆ ದೇಶದ ಮೇಲೆಯೇ ರೋಹಿಣಿಯನ್ನೂ ಮತ್ತಿತರ ಹದಿನಾರು ಸಾವಿರ ಕನ್ಯಾರತ್ನಗಳನ್ನೂ ಸ್ವೀಕರಿಸಿ ಸುಖದಿಂದಿದ್ದು ಅಲ್ಲಿ ಬಂದ ಅನೇಕರಿಗೆ ಬಿಲ್‌ವಿದ್ಯೆಯನ್ನು ಕಲಿಸುತ್ತಿರಲು ಉಗ್ರಸೇನನ ಮಗನಾದ ಮಂಡೋದರಿ ಯೆಂಬುವಳಿಂದ ಪೋಷಿತನಾದ ಕಂಸನೆಂಬುವನು ಅವನ ಶಿಷ್ಯನಾಗಿ ಬಂದು ಸೇರಿ ಅದ್ಭುತಶಕ್ತಿಯನ್ನು ಸಂಪಾದಿಸು ವನು. ಅದೇ ಕಾಲಕ್ಕೆ ಸರಿಯಾಗಿ ಮಗಧಚಕ್ರವರ್ತಿಯಾದ ಜರಾಸಂಧನು ಸಿಂಹರಥನ ಉಪಟಳವನ್ನು ಸಹಿಸಲಾರದೆ ಅವನನ್ನು ಜಯಿಸುವವನಿಗೆ ತನ್ನ ಮಗಳಾದ ಜೀವಂಜಸೆ ಯನ್ನೂ ಕೇಳಿದ ನಾಡನ್ನೂ ಉಂಬಳಿಯಾಗಿ ಕೊಡುವೆನೆಂದು ಘೋಷಣೆ ಮಾಡಿಸಿ ವಸುದೇವನಲ್ಲಿಗೆ ದೂತರನ್ನಟ್ಟುವನು. ಅಲ್ಲಿದ್ದ ಕಂಸನು ಆ ವಾರ್ತೆಯನ್ನು ಕೇಳಿ ತಾನೆ ಹೋಗಿ ಸಿಂಹರಥನನ್ನು ಸಂಹರಿಸಿ ವಸುದೇವನಿಗೊಪ್ಪಿಸಿ ಅವನ ಆಶೆಯ ಮೇರೆಯೇ ಕಂಸನ ಮಗಳಾದ ಜೀವಂಜಸೆಯನ್ನೂ ತನಗಪ್ರಿಯ ನಾಗಿದ್ದ ತಂದೆಯ ಮಗಧರಾಜ್ಯವನ್ನೂ ಜರಾಸಂಧನಿಂದ ಪಡೆದು ಜನಕನನ್ನು ಸಂಕಲೆಯೊಳಿಟ್ಟು ವಸುದೇವನನ್ನು

ಬರಸಿ ಸಿಂಹಾಸನಾಲಂಕೃತಸನ್ನಾಗಿ ಮಾಡಿ ಹೀಗೆಂದು ಬೇಡಿ ಕೊಳ್ಳುವನು.

ಆನೆತ್ತ+[1]ಅರ್ಕಸುತ[1]ಪ್ರವಾಹಭರವೆತ್ತ+ಅಲ್ಲಿರ್ದ
[2]ಮಂಜೂಷೆ[2]ಯು
ತ್ತ+ಆ ನೀಚಾಶ್ರಯಂ+ಎತ್ತ ನಿಮ್ಮ ಬರವೆತ್ತ+ಈ ಶಾಸ್ತ್ರ
ಶಸ್ತ್ರ ಶ್ರಮಂ
ತಾನೆತ್ತ+ಇಕ್ಕುವುದೆತ್ತ ಸಿಂಹರಥನಂ, ಚಕ್ರಿಪ್ರಸಾದೋದಯಾ
ಧೀನಂ ರಾಜ್ಯವಿದೆತ್ತ+ಅದೇವುದು+ಇದಿನಿತುಂ
ಯುಷ್ಮತ್ಪ್ರಸಾದೋದಯಂ
ಅದರಿಂದೆ+ಎನ್ನುಮನ್+ಎನ್ನ ರಾಜ್ಯಭರಮಂ ಸಪ್ತಾಂಗಮಂ
ಸಸ್ಯಸಂ
ಪದಮಂ[3]ವಾರಿದಂ[3]+ಅಂಬುಜಾತವನಮಂ [4]ತಿಗ್ಮಾಂಶು[4]
ನೀಲೋತ್ಪಳಾ
ಸ್ಪದಮಂ [5]ಶೀತಾಂಶು ಮರೀಚಿ[5] ರಕ್ಷಿಸುವವೊಲ್ ನೀಂ
ರಕ್ಷಿಸೆಂದಂದು ಬೇ
ಡಿವನಾತಂ ನತಮೌಳಿರತ್ನರುಚಿಗಳ್ ತಳ್ಪೊಯ್ಯೆ
ದಿಗ್ಭಾಗಮಂ||

ಅಲ್ಲದೆ—

ಭೂವರ ವಸುದೇವಂಗೆ ಮ
ಹೀವಿಶ್ರುತ ಕಂಸರಾಜನಿತ್ತಂ ಬುಧಸಂ

---

1 ಯಮುನಾನದಿ. 2 ಪೆಟ್ಟಿಗೆ. 3 ಮೋಡ. 4 ಸೂರ್ಯ.
5 ಚಂದ್ರಕಿರಣ.

ಭಾವಕಿಯುಂ ಮನ್ಮಥ ಸಂ
ಜೀವಿಕಿಯುಂ [1]ವಿಹಿತಭವದಿಂ[1] ದೇವಕಿಯುಂ

ವಸುದೇವನು ದೇವಕಿಯೊಡನೆ ಸುಖಸಾಮ್ರಾಜ್ಯದಲ್ಲೋಲಾಡುತ್ತಿರಲು ಒಂದು ದಿನ ಮಧುರಾಪುರಕ್ಕೆ ದೇವಕಿಯಗ್ರಜರಾದ ಅತಿಮುಕ್ತಕರೆಂಬ ಮುನಿಗಳು ಚರಿಗೆ ಬರಲು ಕಂಸನ ಹೆಂಡತಿಯಾದ ಜೀವಂಜಸೆಯು 'ತನ್ನ ಕುಲವಲ್ಲರಿಯನ್ನು ಬೇರ್ವೆರಸು ಕಿತ್ತಿತ್ತ್ರವಂತೆ' ದೇವಕಿಯಾನಂದ ವಸ್ತ್ರವನ್ನು ಅವರ ಮುಂದೆತ್ತಿ ಅವರನ್ನು ಅವಮಾನಪಡಿಸಲು ಅವರು ಕೋಪೋದ್ರಿಕ್ತರಾಗಿ

ಜೀವಂಜಸೆ ಯುದ್ಧನಿಬ
ದ್ಧಾವನಿಯೊಳ್ ನಿನ್ನ ಗಂಡನಂ ತಂದೆಯುಮಂ
ದೇವಕಿಗೆ ಪುಟ್ಟಿದಾತನೆ
ದೇವರ್+ಕಾದೊಡ[2]ಪುಡತರ್ಚು[2] ಕೊಲ್ಲದೆ ಮಾಣಂ

ಎಂದು ಶಾಪವಿತ್ತರು. ಅದನ್ನು ಕೇಳಿದ ಕಂಸನು ಚಿಂತಾಕ್ರಾಂತನಾಗಿ ಪತ್ನಿಯನ್ನು ಸಮಾಧಾನಗೊಳಿಸಿ 'ವಿನೀತಿ ಧೂರ್ತಲಕ್ಷಣಂ' ಎನ್ನುವ ಹಾಗೆ ಭಯಸ್ಥನಾಗಿ ವಸುದೇವನನ್ನು ಬೇಡಿ ದೇವಕಿಯನ್ನು ತವರಿಗೆ ಕರೆದೊಯ್ಯುವ ನೆಪದಲ್ಲಿ ಅವರಿಬ್ಬರನ್ನೂ ಸೆರೆಯಲ್ಲಿಟ್ಟು ಆಕೆಯ ಶಿಶುಗಳನ್ನೆಲ್ಲ ಕೊಲ್ಲುವ ಏರ್ಪಾಟು ಮಾಡಿದನು. ದೇವಕಿಯು ಮೂರು ಅವಳಿ ಕೂಸುಗಳನ್ನು ಹೆತ್ತಳು. ನೈಗಮದೇವನು ಅವುಗಳನ್ನು ಮಳಯಾಚಲಕ್ಕೆ ಕೊಂಡೊಯ್ದು ಆ ಸ್ಥಳದಲ್ಲಿ ಮಾಯಾ

---

1 ಉಚಿತವಾದ ವೈಭವ. 2 ಮೇಲೆಬಿದ್ದು.

ಶಿಶುವನ್ನಿಟ್ಟನು. ಆ ಮಾಯಾಶಿಶುಗಳನ್ನು ನೃಶಂಸನಾದ ಕಂಸನು ಕೊಂದಿಕ್ಕಿದನು. ಪುನಃ ದೇವಕಿಯು ಗರ್ಭವನ್ನು ತಾಳಿ ಭಾದ್ರುಪದದಷ್ಟಮಿಯ ಅರ್ಧರಾತ್ರಿಯಲ್ಲಿ

[1]ಅಳಿ[1]ಯುಂ ಪದ್ಮಿನಿ, [2]ವಾರ್ಧಿವೇಳೆ[2] ವಿಷಮುಂ, ಕಸ್ತೂರಿಯುಂ ಪುಲ್ಲೆ[3]ಕ
ಜ್ಜಳ[3]ಮುಂ ದೀಪಿಕೆ, ಕಾಳರಾತ್ರಿ ತಮಮುಂ,[4]ನೀಲಾಶ್ಮ[4]ಮುಂ [5]ರೋಹಣ
ಸ್ಥಳಿ[5], ಭೂದೇವಿ[6]ತಮಾಳ[6]ಮುಂ ಪಡೆವವೋಲ್ ನಾನಾ ಹಿತಾಂಕೂರಕಂ
ದಳನಂ ದೇವಕಿ ಲೀಲೆಯಿಂದೆ ಪಡೆದಳ್ ಕಂಸೋಷ್ಣನಂ ಕೃಷ್ಣನಂ ||

ಆಗ ವಸುದೇವನು ಕಂಸನ ಭಯದಿಂದ ಆ ಶಿಶುವನ್ನು ಮಧುರಾಪುರದ ಹೊರಗಿದ್ದ ಗೊಲ್ಲಪಳ್ಳಿಯ ನಂದನಿಗೆ ಕೊಟ್ಟು ಆತನಿಗೆ ಬೇಡದಿರ್ದ ಪೆಣ್ಗೂಸನ್ನು ತಂದು ದೇವಕಿಯ ಬಳಿಯಲ್ಲಿ ಮಲಗಿಸಲು ಕಂಸನು ಆ ಶಿಶುವನ್ನು ದೇವಕೀಪುತ್ರಿಯೆಂದೇ ಭಾವಿಸಿ ಅದರ ಮೂಗಮುಱಿದು ಮುನಿಯ ಶಾಪವನ್ನು ಉತ್ತರಿಸಿದೆನೆಂದುಕೊಂಡನು. ಆ ಶಿಶುವು ಕೆಲ ಕಾಲ ಕಳೆದಮೇಲೆ ನಿರ್ವೇಗವನ್ನು ಪಡೆದು ಜಿನದೀಕ್ಷೆಯನ್ನು ವಹಿಸಿತು. ಆದರೆ ಮಧುರಾಪಟ್ಟಣದಲ್ಲಿ ಅನೇಕ ಉತ್ಪಾತಗಳುಂಟಾದುವು. ಕಂಸನು ಅವುಗಳಿಂದ ತನ್ನ ಶತ್ರುವು ಬೆಳೆಯು

---

1 ದುಂಬಿ. 2 ಸಮುದ್ರದ ಅಲೆ. 3 ಕಾಡಿಗೆ. 4 ನೀಲರತ್ನ. 5 ರೋಹಣಪರ್ವತ. 6 ಹೊಂಗೇಮರ.

ತ್ತಿರುವನೆಂಬುದನ್ನು ನೈಮಿತ್ತಿಕರಿಂದ ತಿಳಿದು ಅವನನ್ನು ಸಂಹಾರಮಾಡುವುದಕ್ಕಾಗಿ ತನ್ನ ಪೂರ್ವಭವಜೆಣ್ಬರ್ ದೇವತೆಗಳನ್ನು ಕರೆದು 'ದೇವಕಿಯ ಮಗನೆಲ್ಲಿರ್ದಪನೆಂಬುದಂ ಭೇದಿಸಿ ಕೊಲ್ಲಿಂ' ಎನಲು ಅವರು ಪೂತಿನಿಯಾಗಿ, ಗಾಡಿಯಾಗಿ, ಮತ್ತಿಯ ಮರವಾಗಿ, ತಾಳೆಯ ಗಿಡವಾಗಿ, ಎತ್ತಾಗಿ, ಕತ್ತೆಯಾಗಿ, ಕುದುರೆಯಾಗಿ ಆ ಬಾಲಕನನ್ನು ಕೊಲ್ಲಲು ಪ್ರಯತ್ನಪಟ್ಟು ವಿಫಲರಾದರು. ಕೃಷ್ಣನ ಬಾಲಲೀಲೆಯು ಎಲ್ಲರಿಗೂ ಆಶ್ಚರ್ಯಕರವಾಯಿತು. ಒಂದು ದಿನ ಅತಿವೃಷ್ಟಿಯಾಗುತ್ತಿದ್ದಾಗ 'ಕೊಡೆಯಂ ಕ್ರೀಡಾರಸಕ್ಕೆತ್ತುವಂತೆ ಕಿೞ್ತೆತ್ತಿದನೊಂದೆ ಕೆಯ್ಯೊಳೆ ಮಹಾ ಗೋವರ್ಧನಾದ್ರೀಂದ್ರಮಂ. ಇನ್ನೊಂದು ದಿನ 'ಯಾವದಸ್ತಿಪ್ರತೀಕಾರಃ ತಾವತ್ಕುರ್ಯಾತ್ ಪ್ರತಿಕ್ರಿಯಾಂ' ಎಂಬ ಉದ್ದೇಶದಿಂದ ವೃಷಭಾಕಾರದಲ್ಲಿ ಬಂದ ಅರಿಷ್ಟನೆಂಬುವನನ್ನು ಸೋಲಿಸಿ ಓಡಿಸಿದ. ಇದೆಲ್ಲವನ್ನು ಕೇಳಿದ ದೇವಕಿ ವಸುದೇವರು ಸಂತೋಷಗೊಂಡು ಗೋಮುಖಿವ್ರತವ್ಯಾಜದಿಂದ ಬಂದು ಕೃಷ್ಣನನ್ನು ನೋಡಿ ತಮ್ಮ ಮಗನ ಶಕ್ತಿಗೂ ಸಾಹಸಕ್ಕೂ ವಿಸ್ಮಯಪಟ್ಟು ಹಿಂತಿರುಗಿದರು. ಆ ವೇಳೆಗೆ ಸರಿಯಾಗಿ ನಾಗಶಯ್ಯೆಯೂ ಶಾರ್ಙ್ಗಚಾಪವೂ ಹುಟ್ಟಿದುವು. ಆ ನಾಗಶಯ್ಯೆಯನ್ನೇಱುವವನು, ಆ ಶಾರ್ಙ್ಗಧನುರ್ವನ್ನೇಱಿಸುವವನು. ಆ ಪಾಂಚಜನ್ಯವ ಪೂರೈಸುವವನು ಚಕ್ರಿಯಾಗುವನೆಂದು ಕಂಸನು ನೈಮಿತ್ತಿಕರಿಂದ ತಿಳಿದು ಅದನ್ನು ಆಗಲೇ ಅರಿಯಬೇಕೆಂದು ಈ ಕೆಲಸ ಮಾಡಿದವರಿಗೆ ತನ್ನ ಮಗಳನ್ನು ಕೊಡುವೆನೆಂದು ಘೋಷಣೆಯಿಡಿಸಿದನು. ಒಡನೆಯೆ ಕೃಷ್ಣನು ಬಂದು ನಾಗಶಯ್ಯೆಯನ್ನೇರಿ ಶಾರ್ಙ್ಗಚಾಪಮನ್ನೇರಿಸಿ ಪಾಂಚಜನ್ಯವನ್ನು ಪೂರೈಸಿದನು. ಅದನ್ನು

ನೋಡಿ ಮೆಚ್ಚಿದಂತೆ ನಟಿಸಿ ಕಂಸನು ನಾಗಹ್ರದದೊಳಿರುವ ಸಾವಿರೆಸಳ ತಾವರೆಯ ಹೂವನ್ನು ತರಬೇಕೆಂದು ಕೃಷ್ಣನನ್ನು ಕೇಳಿಕೊಂಡನು. ಕೃಷ್ಣನು ವಿಷದ ಮಡುವಿನಂತಿರ್ದ ಕಾಳಿಂದಿಯ ಮಡುವನ್ನು ಕ್ರೀಡಾಸರೋವರವನ್ನು ಪ್ರವೇಶ ಮಾಡುವಂತೆ ಪ್ರವೇಶಿಸಿ ಅಲ್ಲಿದ್ದ ಕಾಳಿಯೆಂಬ ವಿಷಸರ್ಪವನ್ನು ಹಿಡಿದು ಅದರೊಡನೆ ಸಹಸ್ರದಳ ಕಮಲವನ್ನು ಕಂಸನಲ್ಲಿಗೆ ಅಟ್ಟಿದನು. ಯಾವ ವಿಧದಲ್ಲಿಯೂ ತನ್ನ ಶತ್ರುವು ನಾಶ ವಾಗದಿದ್ದುದನ್ನು ನೋಡಿ ತನ್ನ ಮಂತ್ರಿಗಳ ಸೂಚನೆಯಂತೆ ಕಂಸನು ಕುವಳಯಾಪೀಡನೆಂಬಾನೆಯನ್ನು ತರಿಸಿ ಅದರಿಂದ ಕೃಷ್ಣನನ್ನು ಸಂಹಾರಮಾಡುವ ಯೋಚನೆಮಾಡಿ ಹಾಗೆಯೇ ಚಾಣೂರನೆಂಬ ಮಲ್ಲನನ್ನು ಬರಮಾಡಿ 'ನಂದಸುತನ ಮೂಗಿಂ ಬಾಯಿಂದುಚ್ಚಳಿಸೆ ರುಧಿರಮೆನಗಾದಚ್ಚಿಗಮುಂ ಮುಱಿವೊಡೊತ್ತಿ ಮುಱಿ ಚಾಣೂರ' ಎನಲು ಅವನು

ಕ್ಷೋಣಿಪ ನೀವೀ ಮಾತಂ
ಮಾಣಕ್ಕಟ ಕೇಡೆಯಂ [1]ಕಿಮುಳ್ಚ[1]ವುದಕ್ಕೆ
ಚಾಣೂರನೇಕೆ ? ಮುಳಿದಾಂ
[2]ಪೂಣಿಸಿದೊಡೆ[2] ಕೃಷ್ಣನೆಂಬ ಮಾನಸನೊಳನೆ

'ಭಾವಿಪೊಡಾಂ ಜಟ್ಟಿಯುಮಂ ಗೋವಳನ್, ಎನಗಂ ದೇವಕಿ ಸುತಂಗಮುಜಗಜಾಂತರಮಕ್ಕೆ, ದ್ರೋಹರನಾನೆಗಿಕ್ಕುವುದು [3]ತಕ್ಕುದಲ್ಲದೆ ತಗದೆನಲಾಗ[3] ನಾಳೆ ದೇವಕಿಯು[4]ಕ್ಕೆ[4]ಯನ್'

---

1 ಹಿಸುಕು, ಕಿಮಿಚು. 2 ಪ್ರತಿಜ್ಞೆ ಮಾಡಿದರೆ. 3 ಯೋಗ್ಯವಲ್ಲದೆ ಅಯೋಗ್ಯವೆಂದು ಹೇಳಲಾಗುವುದಿಲ್ಲ. 4 ಅಳುವಿಕೆ.

ದೇವರಕಿವಿಗೆಯ್ದಿಸುವೆನ್' ಎನಲು ಕಂಸನು ಅಖಾಡವನ್ನು ಸಜ್ಜುಗೊಳಿಸಿ ಕೃಷ್ಣನನ್ನು ಬರಹೇಳಿ ಮಲ್ಲಗಾಳಕ್ಕೇರ್ಪಡಿಸಿದನು. ಆಗ

ಕಡೆದಂತಪ್ಪಂಗಮುಂ [1]ಕಂಡರಸಿ[1] ಬೆರಸಿದಂತಪ್ಪ[2]ಪಾಂಗ[2]
ಗಳುಂ ಮುಂ
ದಿಡೆ ಬಲ್ಪಿಂ ತುಂಬಿ ಬೀಳ್ಕೊಟ್ಟಿದ ಮಳಯಜದೊಳ್+ಮುಳ್ಗಿ
ನೀಳಾಳಕಂಬೊಲ್
ಕುಡೆ ಚೆಲ್ವಂ ಚಲ್ಲಣಂ ಚಂಡಿಕೆ ಮಿಳಿರೆ [3]ಭುಜಾಸ್ಫಾಳನಂ[3]
ಗೆಯ್ಯುತುಂ ಬೊ
ಬ್ಬಿಡುತಂ ಗಂಡೇಜ[3] ಬಂದಂ ಮದಗಜಗತಿಯಿಂದುರ್ವಿ
ಚಾಣೂರಮಲ್ಲಂ ||

ಆ ವೇಳೆಗೆ ಸರಿಯಾಗಿ ಕೃಷ್ಣನೂ ಯಶೋದೆಯ ಆಶೀರ್ವಾದ ಪಡೆದು ಜೊತೆಯ ಗೋವಳರೊಡನೆ ಹೊರಟು ದಾರಿಯಲ್ಲಿ ರಜಕನನ್ನು ಮರ್ದಿಸಿ ಅವನಲ್ಲಿದ್ದ ರಾಜವಸ್ತ್ರಗಳಿಂದಲಂಕರಿಸಿಕೊಂಡು ಕಂಸನ ಅರಮನೆಯನ್ನು ಪ್ರವೇಶಿಸುತ್ತಿರುವಾಗಲೆ

[4]ಮುಗಿಲಂ ಮು[4]ಟ್ಟಿದ ಕಾಳಕಾಯ ಬಲದಿಂದ[5]ರ್ಕಂಗೆ[5]
ಕೋಡಿಟ್ಟ ಕೋ
ಡುಗಳಿಂ ಬೆಟ್ಟದ ಬೀಟಲಂತಲೆವ ಕೆಯ್ಯಿಂ ಪೃಥ್ವಿ
ಪಾತಾಳಮಂ

---

[1] ಕೊರೆಯುವುದು. [2] ಕಡೆಗಣ್ಣಿನ ನೋಟ. [3] ತೋಳು ತಟ್ಟಿಕೊಳ್ಳುವುದು. [4] ಆಕಾಶ, ಮೋಡ. [5] ಸೂರ್ಯನಿಗೆ.

ಪುಗೆ ಗಾತ್ರಾಪರಮಿಟ್ಟು ಮೆಟ್ಟುವಳವಿಂ [1]ಸಪ್ತಾರ್ಚಿ
[1]ಯಂಸೂಸುವ[2]
ರ್ಚಿ[2]ಗಳಿಂದೇಂ ಕೆದಱುತ್ತೆ ಬಂದುದೊ[3]ಮದಸ್ತಂಬೇರಮಂ[3]
ಬೀರಮಂ ||

ಆಗ ' ಆ ಗಜಮಲ್ಲನೊಳ್ ಪ್ರತಿಮಲ್ಲಂ ಕೃಷ್ಣಂ ಸಿಂಹನಾದ ದಿನಾರ್ದು '

ಒತ್ತಿದೊಡೆ+ಒತ್ತಿ ಪತ್ತಿದೊಡೆ ಪತ್ತಿ ಪೊರಳ್ಚಿದೊಡೆ+ಅಃ
ಪೊರಳ್ಚಿ ಕಾ
ಯ್ದೆತ್ತಿದೊಡೆ+ಎತ್ತಿ ಕುತ್ತಿದೊಡೆ ಕುತ್ತಿದ ಕೊಂಬನೆ[4]
ಕೂಂಕಿ[4]ಕುತ್ತಿ[5]ಕೂ
ಗಱ್ತಿಗೆಯಂ[5]ಕನಲ್ದಿಱಿದಿಱಿಯಿಂ+ಉರ್ಚುವವೊಲ್ ಮೊದ
ದಿಂದಂ+ಉಚ್ಚಿ ಮು
ನ್ನೆತ್ತಿ[6]ಪಿಸುಳ್ದು[6]ಯಾರ್ತನುಗೆ ಮತ್ತಿಭಮಂ
ಹರಿ ಪೊಯ್ದುರುಳ್ಚಿದಂ ||

ಆದರಿಂದ ಕೋಪಗೊಂಡ ಕಂಸನು ಕುಂಚವನ್ನು ಬೀಸಲಾಗಿ

ಎಲೆ+ಎತ್ತಿತ್ತಲ್+ಇದಿರ್ಚಿದಿರ್ಚು, ಕಡಿಕೆಯ್, ನೀಂ
ಬೇಗಂ+ಅಣ್ಮಣ್ಮು ಮೆ
ಯ್ಗಲಿಯಾಗಾಗು ಕೊಲಲ್ಕೆ ನಿನ್ನಪವನಂ ಸುತ್ತಿತ್ತು
ಮುತ್ತಿತ್ತು ಪೆ

---

1 ಸೂರ್ಯನನ್ನು. 2 ಕಿರಣ. 3 ಮದ್ದು. 4 ತಿವಿದು.
5 ಹರಿತವಾದ ಕತ್ತಿ. 6 ಸೀಳು?

ಣ್ಗೊಲಿಯೇನ್ + ಈಗುಮೆ ಪೋಗಲ್ + ಉಣ್ಣದೆ + ಉಿದ್ದೈ
ಮಣ್ಣಾಗಲೆಂದು + ಎನ್ನತೋ
ಳ್ವಲೆಯೊಳ್ ಸಿಲ್ಕಿದೆ + ಇಂದೆ ಸತ್ತೆಯೆನುತುಂ
ಚಾಣೂರನ್ + ಒಟ್ಟೈಸಿದಂ

'ಮುಕುಂದಂ ಮುಗುಳ್ನಗೆ ನಗುತ್ತುಂ ಅಟ್ಟುತಿಂಬ ದೈವಕ್ಕೆ ಪಾಳಂಬಿಟ್ಟೆ' ಎಂದು
ಉತ್ತಮ ಸತ್ವದಿಂ ಪಿಡಿದು ಚಾಣುರನಂ ನೆಲಕಿಕ್ಕಿ ಕೃಷ್ಣನಾ
ಳ್ದು + ಒತ್ತಿದೊಡೆ + ಒತ್ತಿ ಧಾತ್ರಿ ರಸೆಗೆ + [1]ಅರ್ದುದು[1]
ರಕ್ಕಸನ್ + ಬಯ್ದು ಧಾತ್ರಿಯಂ
ಕೆತ್ತಿದನ್ + ಆತನುಂ ಹರಿಯ ಗೋವನ್ + ಇಱಿಂಕಿ
ತದಂಘ್ರಿ ಘಾತದಿಂ
ದತ್ತ ಪತಂಗಮೊಂದು ಶಕಟಂ ಮುಱಿದಾ
ಶಕಟಂಬೊಲಿರ್ಪಿನಂ ||

ಕೆಡೆದರ್ + ಪೋರ್ದರ್ ಪೊರಳ್ದರ್ ಮಿಗೆ
ಪಿಡಿದರ್ + ಆರ್ದೊತ್ತಿದರ್ ಪುತ್ತಮೆರ್ದರ್
ನಿಡುಕೆಯ್ಯಂ ಬೀಡಿದರ್ ನೀಡಿದರ್ + ಎಱೆದು
ನೆಲಕ್ಕಿಕ್ಕಿದರ್ + [2]ಕೂಂಕಿದ[2]ರ್ + ಮೇ
ಗಡಿಯಾದರ್ + ಪತಿ ಗಾಯಂಗೊಳಲೆ
ಮಿಡುಕದಾರಯ್ದರ್ + ಆರಯ್ದ ಗಾಯ
ಕ್ಕೆಡೆಗೊಟ್ಟು + ಉರ್ಕಿಟ್ಟುಕೊಂಡರ್ ಪೊಳೆದು
ಬಿಡಿಸಿದರ್ ಕೃಷ್ಣ ಚಾಣೂರ ಮಲ್ಲರ್ ||

---

[1] ಮುಳುಗಿತು. [2] ಮೇಲಕ್ಕೆದ್ದರು.

'ಆಗಳ್ ಇವನನ್ +ಎನಿತೆನಿತಂ ಕೊಂಡಾಡುವೆನ್ ಎಂದು [1]ವಿಶ್ವಂಭರಂ[1] ಭರಂಗೆಯ್ಯಲೊಡನೆ'

ದಾರುಣದೊಳ್ ನಿಷ್ಠುರ ಚಾ
ಣೂರ ಭುಜಾದಂಡ ಪೃಷ್ಠದೊಳ್ ಪುಟ್ಟಿದುದಾ
ನಾರಾಯಣನುರುಭುಜಾ ಶಾ
ಖಾರಣಿಯೊಳ್ ಶಕ್ತಿರೂಪತೇಜೋಜ್ವಲನಂ ||

[2]ಎಳವಿ ಮಳಪಿಕ್ಕಿ[2] ಕಳಲುಂ
ಕೆಳಗುಂ ತರಹರಿಸಿಕೊಳಲುಮಿಕ್ಕಿದ ಕೆಯ್ಯಂ
ಕಿಱಿಲುಮಣಮಾಱದಸುರಂ
ನೆಱಿಲೊಳ್ ಪೊಣರ್ವಂತೆ [3]ಪೋರ್ದು[3] ಕಱಿಯೆ
ಬಱಿಲ್ದಂ ||

ಒಡೆದುದು ಮುಷ್ಟಿಯಂ ಪಿಡಿದ ಕೆಯ್ಯತಳಂ,
ಕಡುಸೋಂಕು ಸೊಂಕಿ ಮೆಯ್
[4]ಅಡಗಡಗಾಯ್ತು[4] ಡೊಕ್ಕರಿಸೆ ಕಂಸನ ಮಲ್ಲನ
ಕಕ್ಷವಕ್ಷದೆಲ್ವು+
ಉಡಿದುವು ಪೊಯ್ಯುತುಂ ತುಡುಕಿ ತುಟ್ಟಿಸಿ
[5]ಕತ್ತರಿವಾಣಿ[5]ಯಲ್ಲಿ ಕೆಯ್+
ತುಡುಕಿದ ಪೋಲ್ ಬೆರಲ್ ಬಿರಿದುವಾ ಹರಿ ಪೂರಿಸೆ
ಮೆಯ್ಯ ಶಕ್ತಿಯಂ'

---

1 ಲೋಕವನ್ನು ಕಾಪಾಡುವವನು. 2 ? 3 ಜಗಳವಾಡಿ
4 ಮಾಂಸವು ಅಜ್ಜುಗುಜ್ಜಿಯಾಯ್ತು. 5 ಕತ್ತರಿಯಂತೆ ಒಂದರ ಮೇಲೊಂದಿರುವ ಕೈ (ಒಂದುಪಟ್ಟು).

'ಆಗಳ್ ಮುಷ್ಟಿಕಂ ಮುಷ್ಟಿಗೊಂಡು ಮುನಿದು ಮೇಲ್ವಾಯ
ಲೊಡನೆ

ಎರಡುಂ ಕೆಯ್ಯಂಕೊಂಡು+ಇ
ರ್ವರುಮಂ ಬೊಂಬೆಗಳನಾಡಿಪವನವೊಲವನ್+ಈ
ರ್ವರ ತಲೆಯುಂ ತಾಟಿಸಿದಂ
ಬಿರಿವಿನೆಗಂ ತಾಳ ಕಾಯ್ಗಳಂ ತಾಟಿಪವೊಲ್ ||

'ಚಾಣೂರನ ಮುಷ್ಟಿಕನ ಪೆಣದ [1]ಪೊಣರನಿಪ್ಪುರಿಗೂಡೆ[1]
ಕಂಡು ಕೆರ್ದು' ವಜ್ರಮುಷ್ಟಿ ಮೊದಲಾದವರು

ತೆರ್ಕೆಯೊಳ್+ಉಲಿದೆಯ್ತಂದು ಪೊ
ಣರ್ಕೆಗೆ ಮೇಲ್ವಾಯ ಮುಸುಱಿ ಮಲ್ಲಸಹಸ್ರಂ
ಮರ್ಕಟ-ಕಟಕಂ ಮುತ್ತಿ[2]ದ
ಳುರ್ಕೆ[2]ಯ ನೀಳಾಚಲಂಬೊಲಿರ್ದಂ ಕೃಷ್ಣಂ ||

ಹಾಗೆ ಮುತ್ತಿದ ಮಲ್ಲರನ್ನೆಲ್ಲ ಚೆದುರಿಸಿ ಮುಂದೆ ತಮ್ಮ ಮೇಲೆ ಮುತ್ತಲು ಬಂದ ಕಂಸನ ಚತುರ್ಬಲವನ್ನು ಬಲ ದೇವನೂ ವಾಸುದೇವನೂ ಹೆಣಮಯವನ್ನಾಗಿ ಮಾಡಿ ವಿಶೇಷ ವಾಗಿ ಕೋಪಿಸಿಗೊಂಡು ಅಭಿನವನಾರಸಿಂಹಾಡಂಬರುವು ಅದ್ಭುತ ವಾಗುತ್ತಿರಲಾಗಿ

ಮಾಡದ ಕಂಭಮಂ ಮಲಗಿನೊಳ್ ಪರಿಪಾಯ್ದು ನೆಲಕ್ಕೆ
ಬಾಳನ
ಲ್ಲಾಡೆ ನೆಗಪ್ಪಿಕೊಂಡು ತೊಡೆಗಾನರಸಿಂಹನವುಂಕಿ ಕಂಬದಿಂ

---

1 ಜೊತೆಯನ್ನು ಒಟ್ಟುಗೂಡಿಸು. 2 ವ್ಯಾಪಿಸಿಕೊಂಡಿರುವ.

ಮಾಡಿದ ಕಾಳರಕ್ಕಸನನಿಕ್ಕುವವೊಲ್ ನಖದಿಂ ಕರುಳ್ಗಳಂ
ತೋಡಿ ಪಿಸುಳ್ದು ಸೀಳ್ದು ಬಿಸುಟಂ ಕಲಿಕಂಸನನಬ್ಜ
ಲೋಚನಂ

ಇಲ್ಲಿಗೆ ' ಅರ್ಧನೇಮಿ 'ಯು ವಿರಮಿಸುವುದು. ನೇಮಿನಾಥ ಪುರಾಣದ ಸಂಪೂರ್ಣ ಕಥಾಸರಣಿಯ ಸಾಮಾನ್ಯ ಪರಿಚಯಕ್ಕಾಗಿ ಇತರ ಗ್ರಂಥಗಳ ಆಧಾರದಮೇಲೆ ಮುಂದೆ ಹೇಳುವ ರೀತಿಯಲ್ಲಿ ಸಂಗ್ರಹಿಸಬಹುದು.

ಕಂಸವಧೆಯಾದ ಮೇಲೆ ತಮ್ಮಮೇಲೆ ಬಿದ್ದ ಇತರ ವಿರೋಧಿಗಳನ್ನೆಲ್ಲ ಗೆದ್ದು ಬಲದೇವ ವಾಸುದೇವರು ಉಗ್ರಸೇನನ್ನು ಸೆರೆಯಿಂದ ಬಿಡಿಸಿ ಸುಖವಾಗಿರುತ್ತಿರಲು ಜೀವಂಜಸೆಯ ಮೂಲಕ ತನ್ನ ಅಳಿಯನಾದ ಕಂಸನು ವಾಸುದೇವನಿಂದ ಮರಣವೈದಿದುದನ್ನು ಜರಾಸಂಧನು ತಿಳಿದು ಅವರಮೇಲೆ ತನ್ನ ಸೈನ್ಯವನ್ನು ಕಳುಹಿಸುವನು. ಅವನ ಕಡೆಯ ಅಪರಾಜಿತ ಕಾಲಯುವನ ಮೊದಲಾದವರು ಸೋತು ಓಡುವರು. ಪುನಃ ಕಾಲಯುವನನು ದಂಡೆತ್ತಿಬಂದಾಗ ಯಾದವರ ಪುಣ್ಯದೇವತೆ ಯಾದವರೆಲ್ಲ ಸತ್ತರೆಂಬ ಭ್ರಾಂತಿಯನ್ನುಂಟುಮಾಡಲು ಜರಾಸಂಧನು ಅದನ್ನು ಕೇಳಿ ಸಂತುಷ್ಟನಾಗುವನು.

ಯಾದವರು ಜರಾಸಂಧನ ಬಾಧೆಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಮಧುರೆಯನ್ನು ಬಿಟ್ಟು ಸಮುದ್ರಮಧ್ಯದಲ್ಲಿ ದ್ವಾರಾವತಿಯನ್ನು ಕುಬೇರನಿಂದ ನಿರ್ಮಿಸಿ ಸುಖವಾಗಿರುವರು. ಬಲರಾಮನಿಗೆ ರೇವತಿಯೊಡನೆ ವಿವಾಹವಾಗುವುದು. ಕೃಷ್ಣನಿಗೆ ಸತ್ಯಭಾಮೆ, ರುಕ್ಮಿಣಿ, ಜಾಂಬುವತಿ, ಸುಸೀಮೆ, ಲಕ್ಷಣೆ, ಗಾಂಧಾರಿ, ಗೌರಿ, ಪದ್ಮಾವತಿ ಎಂಬ ಎಂಟು ಜನ ರಾಣಿಯಾಗು

ವರು. ರುಕ್ಮಿಣಿಗೆ 'ಒಂದು ಮಗು ಹುಟ್ಟಿ' ಪೂರ್ವಭವದ ವೈರಿಯಿಂದ ಅಪಹರಿಸಲ್ಪಟ್ಟು ನಡುದಾರಿಯಲ್ಲಿ ಸೆಯಲ್ಪಡಲಾಗಿ ಅದು ಕಾಳಶಂಬರನೆಂಬ ವಿದ್ಯಾಧರನಿಗೆ ಸಿಕ್ಕುವುದು. ಅವನು ಅದನ್ನು ತನ್ನ ಹೆಂಡತಿಯಾದ ಕಾಂಚನಮಾಲೆಗೆ ಸಲಹಲು ಕೊಟ್ಟು, ಪ್ರದ್ಯುಮ್ನನೆಂದು ನಾಮಕರಣ ಮಾಡಿ ಯುವಕನಾದ ಮೇಲೆ ಯೌವರಾಜ್ಯಾಭಿಷೇಕ ಮಾಡುವನು. ಪ್ರದ್ಯುಮ್ನನು ತನ್ನ ತಂದೆಯ ಎಲ್ಲ ಶತ್ರುಗಳನ್ನು ಜಯಿಸಿ ಸುಖದಿಂದಿರುವನು. ಅವನಿಗೆ ರೂಪಾತಿಶಯದಿಂದ ಮನ್ಮಥನೆಂಬ ಹೆಸರಾಗು ವುದು. ಸಾಕುತಾಯಿಯಾದ ಕಾಂಚನಮಾಲೆಯು ಮಗನಾದ ಪ್ರದ್ಯುಮ್ನನಲ್ಲಿ ಮೋಹಗೊಳ್ಳುವಳು. ಅವನು ಒಪ್ಪದಿರಲು ಅವನ ಮೇಲೆ ಚಾಡಿಹೇಳಿ ಕಾಳಶಂಕರನಿಂದ ಅವನನ್ನು ಕೊಲ್ಲಿ ಸುವ ಏರ್ಪಾಡುಮಾಡಲು ಆ ಸಂದರ್ಭದಲ್ಲಿ ಪ್ರದ್ಯುಮ್ನ ನಿಗೆ ಅನೇಕವಾದ ವಿದ್ಯಾಪ್ರಾಪ್ತಿಯಾಗುವುದು. ನಾರದರಿಂದ ಮದನನು ತನ್ನ ತಂದೆತಾಯಿಗಳಾರೆಂಬುದನ್ನು ತಿಳಿದು ಮೊದಲು ಅವರಮೇಲೆ ಯುದ್ಧಮಾಡಿ ಕೊನೆಗೆ ಪರಿಚಯವಾದ ಮೇಲೆ ಅವರಿಂದ ಸ್ವೀಕೃತನಾಗಿ ಯುವರಾಜನಾಗುವನು. ತಾನು ಹಿಂದೆ ಕಾಡಿನಲ್ಲಿ ವರಿಸಿದ್ದ ರತಿಯನ್ನೂ ಹಸ್ತಿನಾವತಿ ಯಿಂದ ಕರೆದುತಂದಿದ್ದ ಉದಧಿಕುಮಾರಿಯನ್ನೂ ಮತ್ತಿ ತರ ನೂರೆಂಟು ಪತ್ನಿಯರನ್ನೂ ವಿವಾಹವಾಗುವನು. ಕೃಷ್ಣ ಜಂಭಾವತಿಯರಿಗೆ ಶಂಭುಕುಮಾರನು ಉದಯಿಸುವನು. ರುಕ್ಮಿಣಿಯ ಕುಮಾರಿಯಾದ ವಿದರ್ಭೆಯು ಮದನನ ಪತ್ನಿ ಯಾಗುವಳು.

ಇದೇ ಕಾಲದಲ್ಲಿ ದ್ವಾರಾವತಿಯಲ್ಲಿ ಬಲರಾಮ ಕೃಷ್ಣ ಮನ್ಮಥರಿಂದ ಓಲೈಸಿಕೊಳ್ಳುತ್ತಿದ ಸಮುದ್ರವಿಜಯ ಮಹಾ

ರಾಜನಿಗೆ ಶಿವದೇವಿಯುದರದಲ್ಲಿ ಹಿಂದೆ ಅಹಮಿಂದ್ರನಾಗಿದ್ದ ದೇವನು ನೇಮಿಸ್ವಾಮಿಯಾಗಿ ಉದಯಿಸುವನು. ಗರ್ಭಾವತರಣ ಜನ್ಮಾಭಿಷವನ ಕಲ್ಯಾಣಗಳಾದ ಮೇಲೆ ಬಾಲಲೀಲೆಯನ್ನು ಮುಗಿಸಿ ದಿವ್ಯಸುಂದರದೇಹವನ್ನು ಧರಿಸಿ ತಾರುಣ್ಯವನ್ನು ತಾಳುವನು.

ಹಸ್ತಿನಾವತಿಯಲ್ಲಿ ಪಾಂಡುವು ವೈರಾಗ್ಯಪರನಾಗಿ ಮಾದ್ರಿಯೊಡನೆ ತಪಸ್ಸಿಗೆ ಹೊರಟುಹೋಗುವನು. ಭೀಷ್ಮನು ಕೌರವ ಪಾಂಡವರನ್ನು ರಕ್ಷಿಸುತ್ತಿದ್ದು ಅಲ್ಲಿಗೆ ಬಂದ ಬ್ರಾಹ್ಮಣನಾದ ದ್ರೋಣನೆಂಬುವನಿಗೆ ಕೃಪನ ತಂಗಿಯಾದ ಸುಂದರಿಯೆಂಬುವಳನ್ನು ಕೊಟ್ಟು ಮದುವೆ ಮಾಡಿ ಆತನನ್ನು ಬಾಲಕರ ವಿದ್ಯಾಗುರುವನ್ನಾಗಿ ಏರ್ಪಡಿಸುವನು. ದ್ರೋಣ ಸುಂದರಿಯರಿಗೆ ಅಶ್ವತ್ಥಾಮನು ಮಗನಾಗುವನು.

ಚಂಪಾಪುರದಲ್ಲಿ ಭಾನುರಾಜನು ದೀಕ್ಷೆಯನ್ನು ವಹಿಸಲು ಕರ್ಣನು ರಾಜನಾಗುವನು. ಜ್ವಾಲಾಮಾಲಿನೀ ದೇವಿಯಿಂದ ತನ್ನ ತಾಯಾರೆಂಬುದನ್ನರಿಯಲು ಊರಿಮಾಲೆಯೆಂಬ ವಸ್ತ್ರವನ್ನು ಪಡೆಯುವನು. ಕರ್ಣನ ಅಸಾಧಾರಣವಾದ ಶಕ್ತಿಯನ್ನರಿತ ದುರ್ಯೋಧನನು ಅವನನ್ನು ಸ್ನೇಹಿತನನ್ನಾಗಿ ಮಾಡಿ ಅನೇಕ ದೇಶಗಳಿಗೆ ಅವನನ್ನು ರಾಜನನ್ನಾಗಿ ಮಾಡುವನು. ಕೌರವರ ಪಾಂಡವರ ದ್ವೇಷ, ಅರಗಿನ ಮನೆಯ ಪ್ರಸಂಗವೇ ಮೊದಲಾದುವು ಯಥಾಕ್ರಮವಾಗಿ ನಡೆದು ಅರ್ಜುನನಿಗೆ ದ್ರೌಪದಿಯ ವಿವಾಹವಾಗುವುದು. ಧರ್ಮರಾಯಾದಿ ಇತರ ಸಹೋದರರಿಗೆಲ್ಲ ಪ್ರತ್ಯೇಕವಾಗಿ ಅನೇಕ ಮದುವೆಗಳಾಗುವುವು. ಇಂದ್ರಪ್ರಸ್ಥವೇ ಮೊದಲಾದೆಡೆಗಳಲ್ಲಿ ಪಾಂಡವರು ಸುಖವಾಗಿ ರಾಜ್ಯವಾಳುತ್ತಿರುವರು. ಅರ್ಜುನನಿಗೆ

ಸುಭದ್ರೆಯೊಡನೆ ವಿವಾಹವಾಗುವುದು. ಅವರಿಗೆ ಅಭಿಮನ್ಯು ಜನಿಸುವನು. ಕೃಷ್ಣನ ಮಗಳಾದ ಸುಂದರಿಯು ಅಭಿಮನ್ಯುವಿನ ಪತ್ನಿಯಾಗುವಳು. ಕೌರವ ಪಾಂಡವರಿಗೆ ದ್ಯೂತವಾಗಿ ಪಾಂಡವರು ವನವಾಸಕ್ಕೆ ತೆರಳುವರು. ಅರ್ಜುನನು ಕಾಡಿನಲ್ಲಿ ಅನೇಕ ವಿದ್ಯೆಗಳನ್ನು ಸಂಪಾದಿಸುವನು. ಪದ್ಮರಥನೆಂಬ ರಥನೂಪುರ ಚಕ್ರವಾಳದರಸು ದ್ರೌಪದಿಯಲ್ಲಿ ಮೋಹಿತನಾಗಿ ಅವಳನ್ನು ಕೊಂಡೊಯ್ಯುವನು. ಬಲದೇವ ವಾಸುದೇವ ಪಾಂಡವಾದಿಗಳೆಲ್ಲ ಹೋಗಿ ಅವಳನ್ನು ಬಿಡಿಸಿಕೊಂಡು ಬರುವರು. ವನವಾಸವು ಮುಗಿಯುವುದು. ದ್ರೌಪದಿಯನ್ನು ದ್ರುಪದನ ಮನೆಗೆ ಕಳುಹಿ ಕುಂತಿಯನ್ನು ಕೃಷ್ಣನೊಡನೆ ಬೀಳ್ಕೊಟ್ಟು ಪಾಂಡವರು ವಿರಾಟ ನಗರದಲ್ಲಿ ಅಜ್ಞಾತವಾಸವನ್ನು ಕಳೆಯುವರು. ಕೀಚಕವಧೆ, ಗೋಗ್ರಹಣ, ಕೌರವರಿಗೆ ಪರಾಭವ-ಅರ್ಜುನನಿಗೆ ಲಲಿತಾಂಗಿಯೇ ಮೊದಲಾದ ಅನೇಕ ಕನ್ಯೆಯರೊಡನೆ ವಿವಾಹವಾಗುತ್ತದೆ. ಪಾಂಡವರು ದ್ವಾರಾವತಿಯಿಂದ ಬಂದ ಸತ್ಯಕನೆಂಬುವನೊಡನೆ ವರ್ಷಾಕಾಲವಾದ ಮೇಲೆ ನೇಮಿ ದರ್ಶನಕ್ಕೆ ಅಲ್ಲಿಗೆ ಬರುವುದಾಗಿ ಹೇಳಿಕಳುಹಿಸುವನು. ಕರ್ಣನು ಉರಿಯ ವಸ್ತ್ರವನ್ನು ಹೊದಿಸಿ ಪರೀಕ್ಷಿಸಿ ಕುಂತಿಯು ತನ್ನ ತಾಯೆಂದು ಅರಿತು ಅವಳಿಗೆ ತಮ್ಮಂದಿರ ಮೇಲೆ ಅಮೋಘಾಸ್ತ್ರವನ್ನು ಪ್ರಯೋಗಿಸುವುದಿಲ್ಲ ವೆಂದು ವಾಗ್ದಾನಮಾಡುವನು. ಪಾಂಡವರು ದ್ವಾರಾವತಿಗೆ ಪ್ರಯಾಣಮಾಡಿ ನೇಮಿತೀರ್ಥೇಶ್ವರರಿಗೆ ನಮಸ್ಕರಿಸಿ ಕೃಷ್ಣ ಬಲರಾಮಾದಿಗಳೊಡನೆ ಸುಖವಾಗಿರುವರು.

ಇತ್ತ ದ್ವಾರಾವತಿಗೆ ವ್ಯಾಪಾರಕ್ಕಾಗಿ ಹೋಗಿದ್ದ ಶೆಟ್ಟಿಗಳಿಂದ ಅಲ್ಲಿ ಕೃಷ್ಣ ಬಲರಾಮರು ನೇಮಿತೀರ್ಥಂಕರರ ಆಶ್ರಯದಲ್ಲಿ

ಬಹು ವೈಭವದಿಂದ ಮೆರೆಯುತ್ತಿದ್ದಾರೆಂಬುದನ್ನು ಜರಾಸಂಧನು ಕೇಳಿ ಯಾದವ ವಂಶವು ನಿರ್ನಾಮವಾಯಿತೆಂದು ತಾನು ಹಿಂದೆ ಕೇಳಿದ ಮಾತು ಸುಳ್ಳಾದುದಕ್ಕೆ ಕಿಡಿಕಿಡಿಯಾಗಿ ಅವರ ಮೇಲೆ ಯುದ್ಧಕ್ಕೆ ಸನ್ನದ್ಧನಾಗುವನು. ಪಾಂಡವರೂ ತಮಗೆ ಬರ ಬೇಕಾದ ರಾಜ್ಯಾರ್ಧಕ್ಕಾಗಿ ಕೃಷ್ಣನ ಸೂಚನೆಯ ಪ್ರಕಾರ ಬಹು ಬುದ್ಧಿವಂತನಾದ ಕೃಷ್ಣನೆಂಬ ದೂತನನ್ನು ಕೌರವನಲ್ಲಿಗೆ ಕಳುಹಿಸುವರು. ಅವನ ದೌತ್ಯವು ನಿಷ್ಫಲವಾಗುವುದು. ಯುದ್ಧವೇ ನಿಷ್ಕರ್ಷೆಯಾಗುವುದು. ಜರಾಸಂಧನು ತನ್ನ ಅಪಾರ ವಾದ ಸೈನ್ಯವನ್ನು ಕೃಷ್ಣನ ಮೇಲೆ ಕಳುಹಿಸುವನು. ಇದೇ ಸಮಯವೆಂದು ದುರ್ಯೋಧನನು ಅವನ ಪಕ್ಷವನ್ನು ವಹಿಸು ವನು. ಪಾಂಡವ, ಬಲದೇವ, ವಾಸುದೇವಾದಿಗಳು ಸಮುದ್ರ ವಿಜಯ ನೇಮೀಶ್ವರರಿಗೆರಗಿ ಯುದ್ಧಪ್ರಯಾಣ ಮಾಡುವರು. ಅವರಿಗೆ ಸಹಾಯವಾಗಿ ಬರುತ್ತಿದ್ದ ಕಾಳಶಂಬರ ಮೊದಲಾದ ಖೇಚರ ಪಡೆಯನ್ನು ಜರಾಸಂಧನ ಸಾಮಂತರು ತಡೆದುದನ್ನು ಕೇಳಿ ವಸುದೇವ, ಮನ್ಮಥ, ಶಂಭುಕುಮಾರರು ವಿಜಯಾರ್ಧಗಿರಿಗೆ ಪ್ರಯಾಣಮಾಡುವರು.

ಜರಾಸಂಧ ಕೃಷ್ಣರ ಯುದ್ಧ ಅನಿವಾರ್ಯವಾಯಿತು. ಜರಾ ಸಂಧನ ಕಡೆ ಕರ್ಣನಿಗೆ ಮೊದಲು ಸೇನಾಧಿಪತ್ಯಾಭಿಷೇಕ ವಾಯಿತು. ಅವನು ಪದ್ಮವ್ಯೂಹವನ್ನು ರಚಿಸಿದನು. ಇತ್ತ ಅರ್ಜುನನಿಗೆ ಕೃಷ್ಣನೆಂಬುವನು ಸಾರಥಿಯಾದನು. ಮೊದಲು ನಾಲ್ಕು ದಿವಸ ಶ್ವೇತ, ಭೀಷ್ಮ, ಕಾಮದಂತ—ಬಲರಾಮ, ಸತ್ಯಕ-ವಜ್ರಬಾಹು, ಜಯದ್ರಥ, ಉತ್ತರರಿಗೆ ಯುದ್ಧವಾಯಿತು. ಅಯ್ದನೆಯ ದಿನ ಅಭಿಮನ್ಯುವಿನ ಚಕ್ರವ್ಯೂಹ ಪ್ರವೇಶ, ಮರಣ. ಅದರ ಫಲವಾಗಿಯೇ ಅರ್ಜುನನಿಂದ ಸೈಂಧವವಧೆಯಾಗು

ವುದು. ಮೂರನೆಯ ದಿನ ಭೀಷ್ಮನು ನಿರ್ವೇಗಪರನಾಗಿ ಯುದ್ಧ ಮಾಡುವಂತೆ ನಟಿಸಿ ಪಂಚಪರಮೇಷ್ಠಿಗಳನ್ನು ಧ್ಯಾನಿಸುತ್ತ ಸತ್ತು ಸ್ವರ್ಗದಲ್ಲಿ ದೇವನಾಗಿ ಹುಟ್ಟಿದನು. ಮುಂದಿನ ದಿನ ಕರ್ಣನು ಎಲ್ಲರನ್ನೂ ವಿರಥರನ್ನಾಗಿಸಿದನು. ಅದಕ್ಕೆ ಮೂರನೆಯ ದಿನ ದ್ರೋಣರ ಸೇನಾಧಿಪತ್ಯ. ಪಾಂಡವರ ಕಡೆ ದ್ರುಪದನ ಮರಣ, ಪ್ರತಿಪಕ್ಷದಲ್ಲಿ ದೃಷ್ಟದ್ಯುಮ್ನನಿಂದ ದ್ರೋಣಾಚಾರ್ಯರ ವಧೆ. ಮರುದಿವಸ ಕರ್ಣಾರ್ಜುನರ ಕಾಳಗ; ಯುದ್ಧದಲ್ಲಿ ಅರ್ಜುನ ನಿಂದ ತನಗೆ ಮುಕುಟ ಭಂಗವಾದುದಕ್ಕೆ ನೊಂದು ಕರ್ಣನು ಅದು ಮರಣಕ್ಕೆ ಸಮಾನವೆಂದು ನಿರ್ವೇಗಪರನಾಗಿ ದಮವರ ರೆಂಬ ಮುನೀಶ್ವರರಲ್ಲಿ ದೀಕ್ಷೆಯನ್ನು ಪಡೆದು ಸತ್ತು ಸ್ವರ್ಗದಲ್ಲಿ ದೇವನಾಗಿ ಪುಟ್ಟಿದನು.

ಕರ್ಣನು ಹೊರಟುಹೋದ ಮೇಲೆ ದುರ್ಯೋಧನನು ಬಹು ರೂಪಿಣೀವಿದ್ಯೆಯನ್ನು ಸಂಪಾದಿಸಲು ವೈಶಂಪಾಯನ ಸರೋವರ ದಲ್ಲಿರಲು ಅಲ್ಲಿಗೇ ಭೀಮನು ಬಂದು ಗದಾಯುದ್ಧ ಮಾಡಿ ಅವನ ತೊಡೆಯನ್ನು ಮುರಿಯುವನು. ಜರಾಸಂಧನು ಖಿನ್ನ ನಾಗುವನು. ಅಶ್ವತ್ಥಾಮನು ರಾತ್ರಿಯಲ್ಲಿ ಕಳ್ಗೊಲೆಯನ್ನು ಮಾಡಿ ತನ್ನ ತಪ್ಪನ್ನರಿತಮೇಲೆ ನಿರ್ವೇಗಪರನಾಗಿ ದೀಕ್ಷೆಯನ್ನು ವಹಿಸುವನು.

ಮರುದಿನ ಕೃಷ್ಣ ಜರಾಸಂಧರಿಗೆ ಕಾಳಗವು ಪ್ರಾರಂಭ ವಾಯಿತು. ಉಭಯಪಕ್ಷಗಳೂ ಬಹು ವೀರಾವೇಶದಿಂದ ಕಾದಾಡಿದುವು. ಆದರೂ ಜರಾಸಂಧನಿಗೆ ಅಸ್ತ್ರಗಳೆಲ್ಲ ನಿಷ್ಪ್ರ ಯೋಜನವಾದುವು. ಆಗ ಅವನು ತನ್ನ ಚಕ್ರವನ್ನು ಪ್ರಯೋಗ ಮಾಡಿದನು. ಅದು ಕೃಷ್ಣನನ್ನು ಮೂರು ಸಲ ಪ್ರದಕ್ಷಿಣೆಮಾಡಿ ಅವನ ಬಲಭಾಗದಲ್ಲಿ ನಿಂತಿತು. ಕೃಷ್ಣನು

ನಿರ್ವೀರ್ಯನಾದ ಅವನನ್ನು ಶರಣಾಗೆಂದು ಎಷ್ಟು ಕೇಳಿದರೂ ಒಪ್ಪಲಿಲ್ಲವಾಗಿ ಅದೇ ಚಕ್ರದಿಂದ ಅವನ ತಲೆಯನ್ನು ಕತ್ತರಿಸಿದನು. ಆಕಾಶದಲ್ಲಿ ಪುಷ್ಪವೃಷ್ಟಿಯಾಗುತ್ತಿರಲು ಎಲ್ಲರೂ ತಮ್ಮ ಬೀಡುಗಳಿಗೆ ತೆರಳಿದರು. ಕೃಷ್ಣ ಬಲರಾಮರು ಭರತ ತ್ರಿಖಂಡವನ್ನೆಲ್ಲ ಗೆದ್ದು ದಿಗ್ವಿಜಯವನ್ನು ಮುಗಿಸಿಕೊಂಡು ದ್ವಾರಾವತಿಗೆ ಬಂದು ನೇಮೀಶರಿಗೆ ನಮಸ್ಕರಿಸಿ ಅವರ ಪ್ರಭಾವವನ್ನು ಕೊಂಡಾಡಿದರು. ಧರ್ಮರಾಜನು ಹಸ್ತಿನಾವತಿಗೆ ಹೋಗಿ ಧೃತರಾಷ್ಟ್ರ ವಿದುರರಿಗೆ ಪ್ರತ್ಯೇಕ ರಾಜ್ಯಗಳನ್ನಿತ್ತು ಅನುಜರಿಗೆ ಹಸ್ತಿನಾವತಿಯನ್ನು ಕೊಟ್ಟು ತಾನು ದಕ್ಷಿಣ ಮಧುರೆಯಲ್ಲಿ ನೆಲೆಸಿದನು.

ಹೀಗೆ ಕೆಲವು ದಿನ ಕಳೆಯುತ್ತಿರಲಾಗಿ ಒಂದು ವಸಂತ ಕಾಲದಲ್ಲಿ ನೇಮೀಶ್ವರರು ಇತರರ ಒತ್ತಾಯದ ಮೇಲೆ ಜಲಕ್ರೀಡೆಯಾಡುತ್ತಿರುವಾಗ ಸತ್ಯಭಾಮೆಯು ನಾಗಶಯ್ಯೆಯನ್ನೇರಿ ಪಾಂಚಜನ್ಯವನ್ನೂದಿದ ತನ್ನ ಪತಿ ಕೃಷ್ಣನಿಗೆ ನೇಮೀಶ್ವರರು ಸಮಾನವಲ್ಲವೆಂದು ಅಲ್ಲಗಳೆದಳು. ನೇಮೀಶ್ವರರಿಗೂ ಕೋಪ ಬಂದು ತಕ್ಷಣ ಆಯುಧಶಾಲೆಗೆ ಹೋಗಿ ಆ ಕಾರ್ಯಗಳನ್ನು ನಿರಾಯಾಸವಾಗಿ ಮಾಡಿಬಿಟ್ಟರು. ಅದನ್ನು ಕೇಳಿದ ಕೃಷ್ಣ ಬಲರಾಮರು ಅವರು ತಮ್ಮ ರಾಜ್ಯವನ್ನು ಅಪಹರಿಸಬಹುದೆಂಬ ಶಂಕೆಯಿಂದ ಅವರಿಗೆ ಸಂಸಾರದಲ್ಲಿ ನಿರ್ವೇಗವುಂಟುಮಾಡುವ ಸಂಚನ್ನು ಯೋಚಿಸಿ ಸಮುದ್ರವಿಜಯರ ಮೂಲಕ ನೇಮೀಶ್ವರರಿಗೆ ವಿವಾಹವನ್ನೇರ್ಪಡಿಸಿ ಆ ಕಾಲದಲ್ಲಿ ಕೃತ್ರಿಮವಾದ ಹಿಂಸಾತ್ಮಕ ಸನ್ನಿವೇಶಗಳನ್ನು ಕಲ್ಪಿಸಿ ಅವರು ಸಂಸಾರನಿತ್ಯತೆಗೆ ಹೇಸಿ ದೀಕ್ಷೆಗೊಳ್ಳುವಂತೆ ಮಾಡಿದರು. ಇಂದ್ರನು ಪರಿನಿಷ್ಕ್ರಮಣ ಕಲ್ಯಾಣವನ್ನು ನಡೆಸಿದನು.

ಮುಂದೆ ಯೋಗ್ಯವಾದ ತಪಸ್ಸನ್ನಾಚರಿಸಲು ಕೇವಲ ಜ್ಞಾನೋತ್ಪತ್ತಿಯಾಯಿತು. ಪಂಚಕಲ್ಯಾಣಗಳೂ ಪೂರ್ಣಗೊಂಡುವು. ಇಂದ್ರಾದಿ ಸಮಸ್ತ ದೇವತೆಗಳೂ ಬಲರಾಮ ಕೃಷ್ಣಾದಿಗಳೂ ತೀರ್ಥಂಕರರಿಗೆ ತ್ರಿಃಪ್ರದಕ್ಷಣವನ್ನು ಮಾಡಿ ನಮಸ್ಕರಿಸಿ ಬೇಡಿಕೊಂಡಂತೆ ನಾನಾ ದೇಶಗಳಲ್ಲಿ ಸಂಚಾರಮಾಡಿ ಧರ್ಮಾಮೃತ ವರ್ಷದಿಂದ ಲೋಕವನ್ನು ತೃಪ್ತಿಗೊಳಿಸಿದರು. ಒಂದು ದಿನ ಬಲರಾಮನೆದ್ದು ನೇಮಿಜಿನೇಶರಿಗೆ ಕೈಮುಗಿದು ತಮ್ಮ ಮತ್ತು ದ್ವಾರಾವತಿಯ ಭವಿಷ್ಯವೇನೆಂದು ಕೇಳಲು ಅಂದಿನಿಂದ ಹನ್ನೆರಡು ವರ್ಷಕ್ಕೆ ದ್ವಾರಾವತಿಯು ದೀಪಾಯನದಿಂದ ಸುಟ್ಟುಹೋಗುವುದೆಂದೂ ಕೃಷ್ಣ ಬಲರಾಮರಿಬ್ಬರು ವಿನಾ ಎಲ್ಲ ಯಾದವರೂ ಬೆಂದುಹೋಗುವರೆಂದೂ ಜರತ್ಕುಮಾರನ ಬಾಣದಿಂದ ಕೃಷ್ಣನು ಮರಣವನ್ನೈದಿ ಕಾಲಾಂತರದಲ್ಲಿ ತೀರ್ಥಂಕರನಾಗುವನೆಂದೂ ಬಲರಾಮನು ಅವನ ದುಃಖದಿಂದ ನರಳಿ ಸತ್ತು ಕೃಷ್ಣತೀರ್ಥಂಕರರ ಅನಂತರ ಕಾಲದಲ್ಲಿ ಹುಟ್ಟಿ ಕರ್ಮಕ್ಷಯಮಾಡಿ ತೀರ್ಥಂಕರನಾಗುವನೆಂದೂ ತಿಳಿಸಿದರು. ಇದನ್ನು ಕೇಳಿದ ಮದನನಿಗೆ ನಿರ್ವೇಗವುಂಟಾಯಿತು. ಮೊದಲು ಪ್ರತಿಭಟಿಸಿದ ತನ್ನವರಿಗೆಲ್ಲ ಧರ್ಮೋಪದೇಶ ಮಾಡಿ ಅವರೊಡನೆ ಮದನನು ದೀಕ್ಷೆಯನ್ನು ವಹಿಸಿದನು. ನೇಮೀಶರ ವಾಕ್ಯನಂತೆಯೇ ದ್ವಾರಾವತಿಯು ಅಗ್ನಿದಗ್ಧವಾಯಿತು. ಕೃಷ್ಣನು ಜರತ್ಕುಮಾರನ ಬಾಣದಿಂದ ಪ್ರಾಣವನ್ನು ನೀಗಿದನು. ಬಲರಾಮನು ಮೋಹದಿಂದ ತಮ್ಮನ ಹೆಣವನ್ನು ಹೊತ್ತು ಅಲೆದು ಜ್ಞಾನೋದಯವಾದ ಮೇಲೆ ಅದನ್ನು ಸುಟ್ಟು ದೀಕ್ಷೆಯನ್ನು ಹೊಂದಿ ಸತ್ತು ಆರನೆಯ ಸ್ವರ್ಗದಲ್ಲಿ ದೇವನಾದನು. ನೇಮಿಜಿನೇಶರಿಗೆ

ಸಮವಸರಣ ಪ್ರಾಪ್ತಿಯಾಯಿತು. ಪಾಂಡವರೇ ಮೊದಲಾದ ಅನೇಕರು ತಮ್ಮ ಭಾವಾವಳಿಗಳನ್ನರಿತು ಕರ್ಮಕ್ಷಯವನ್ನು ಮಾಡಿ ದೀಕ್ಷೆಗೊಂಡರು. ದೇವೇಂದ್ರನು ಸ್ವಾಮಿಯ ನಿರ್ವಾಣಕಲ್ಯಾಣದಲ್ಲಿ ಆನಂದನೃತ್ಯವನ್ನಾಡಿ ಲೋಕವನ್ನು ತಣಿಸಿದನು.

ಅರ್ಧನೇಮಿಯು ಲೀಲಾವತಿಗಿಂತ ಉತ್ತಮವಾದ ಕಾವ್ಯ. ಇಲ್ಲಿ ಬರುವ ಅನೇಕ ವರ್ಣನೆಗಳು ಜೀವಂತವಾಗಿವೆ. ಆವೇಶ ಪೂರ್ಣವಾಗಿವೆ. ಧರ್ಮಗ್ರಂಥವಾಗಿರುವುದರಿಂದ ಕವಿಗೆ ಈ ಕಾವ್ಯದಲ್ಲಿ ತನ್ನ ಪ್ರತಿಭೆಯನ್ನು ವಿಶೇಷ ಪ್ರದರ್ಶಿಸುವುದಕ್ಕೆ ಅವಕಾಶವಿಲ್ಲ. ಭಾವಾವಳಿಗಳ ನಿರೂಪಣ ಸಂದರ್ಭದಲ್ಲಿ ಕತೆ ಉಪಕತೆಗಳು ಅಸಂಖ್ಯಾತವಾಗಿ ಬರುತ್ತವೆ. ಅವುಗಳನ್ನು ನಿರೂಪಿಸುವುದರಲ್ಲಿಯೂ ನೇಮಿಚಂದ್ರನು ವಿಶೇಷ ಕತ್ತರಿ ಪ್ರಯೋಗಗಳನ್ನು ಮಾಡಿ ಸಂಗ್ರಹವಾಗಿ ಹಿತಮಿತವಾಗಿ ಹೇಳಿದ್ದಾನೆ. ಈ ಗ್ರಂಥವು ಪೂರ್ಣವಾಗಿದ್ದರೆ ಈಗ ಉಪ ಲಬ್ಧವಾಗಿರುವ ಇತರ ಎಲ್ಲ ನೇಮಿನಾಥ ಪುರಾಣಗಳಿಗಿಂತ ಆಕಾರದಲ್ಲಿ ಚಿಕ್ಕದಾಗಿರುತ್ತಿತ್ತು. ವರ್ಣನೆಗಳಲ್ಲಿಯೂ ಒಂದು ವೈಶಿಷ್ಟ್ಯವಿದೆ. ಸ್ಪಷ್ಟ ಚಿತ್ರಣವಿದೆ. ಪ್ರತಿಭೆಯ ಮಿಂಚನ್ನು ಅಲ್ಲಲ್ಲಿ ಕಾಣಬಹುದು. ಮುಂದಿನ ವಾಮನಾವತಾರದ ಚಿತ್ರ ವನ್ನು ನೋಡಿ.

ವಟು ಮರದುದ್ದನಾದನ್ + ಅನಿತಿಲ್ಲದೊಡೆ + ಇತ್ತಲೆಯುದ್ದ
ವಾದನ್ + ಅ

ಕ್ಕಟ ಮುದಿಲುದ್ದವಾದನ್ + ಇವನಾವನೊ ಪೆರ್ಮರದುದ್ದ
ವಾದನ್ + ೩೦

ತುಟು ಗಿರಿಯುದ್ಧವಾದನ್+ಇದು ವಿಸ್ಮಯಮಾ ಮುಗಿಲುದ್ದ
ವಾದನೋ
ವ[1]ಟಮುಟಿಗಂ[1] ದಿಟಕ್ಕನೆ ಕರಂ ಬೆಳೆದಂ ಮನದಂತೆ ವಾಮನಂ||

ವುರನಂ ಮುಟ್ಟಿದನ್+ಇಲ್ಲ ಮೇಘಘಟೆಯೊಳ್
ಕಾಲ್ಮೊಗೆದನ್+ಇಲ್ಲಿಲ್ಲ+ಭೂ
ಧರಮಂ ದಾಂಟಿದನ್+ಇಲ್ಲ [2]ಬಾಂದೊರೆ[2]ಯೊಳಿಟ್ಟಂ
ಕಾಲನ್+ಇಲ್ಲಿಲ್ಲ+ಭಾ
ಸ್ಕರನಂ ಮಾಯದ ಮಾಣಿ ಸೇದೊಡದನೇ ಇಲ್ಲೆಂಬಿನಂ
ನೀಡಿದಂ
ತರದಿಂ ಪಾದಮನರ್ವಿ ಕೊರ್ವಿ ಬಲಿಯಂ ಗೆಲ್ವಾಮನಂ
ವಾಮನಂ ||

ಅದೆ ಪೊಸಪೊನ್ನ[3]ಸತ್ತಿಗೆ[3]+ಅದಲ್ಲದು ರತ್ನ[4]ಹಟ[4]
ಕ್ಕಿರೀಟಮ್+ಅ
ಲ್ಲದು ವರವಜ್ರಕುಂಡಳಂ+ಅದಲ್ಲದು ಕೌಸ್ತುಭರತ್ನಮ್+
ಅಂತದ
ಲ್ಲದು ಕರಚಕ್ರಮ್+ಅದಲ್ಲದು ನಾಭಿಸರೋಜಮೆನಲ್
ದಿನೇಶ ಬಿಂ
ಬದನೆಲೆ ತಗ್ಗಿತಪ್ಪಿನಂ+ಅನುಕ್ರಮದಿಂ ಬೆಳೆದಂ ತ್ರಿವಿಕ್ರಮಂ ||

---

1 ಮೋಸಗಾರ. 2 ಆಕಾಶಗಂಗೆ. 3 ಕೊಡೆ. 4 ಕಾಂತಿ
ಯುಕ್ತವಾದ.

ಇದು ಲೀಲಾಧೃತಭೂ[1]ಕರೇಣುಕರಂ[1]+ಅಲ್ತು+[2]ಆಭ್ರೋ
ತ್ಪಟೀಕೇತು[2]+ಅ
ಲ್ತು+ಇದು ಸೂರ್ಯಾಂಬುಜನಾಳಂ+ಅಲ್ತು+ಶಶಿಲೋಕಾ
ದೀಪಿಕಾಸ್ತಂಭಂ+ಅ
ಲ್ತು + ಇದು [3]ತಾರಾಕುಸುಮಾವಳೀವಿಟಪಂ[3]+ಅಲ್ತು+
[4]ಅಭ್ರಾವನೀ ಸೀಮಂ[4]+ಅ
ಲ್ತು+ಇದೆನಲ್ ತಾಂ ಬಳೆದತ್ತನುಕ್ರಮದಿಂ+ಆ ಪಾದಂ
ಪಯೋಜಾಕ್ಷನಾ
ತರುವಿಂದತ್ತತ್ತ ನೀಳ್ದಂ ಘನಪಟಲದಿನತ್ತತ್ತ ಮಿಕ್ಕಂ
[5]ಹಿಮೋರ್ವೀ
ಧರ[5]ದಿಂದತ್ತತ್ತ ಪೋದಂ ರವಿಯರಥದಿನತ್ತತ್ತ
ಮೆಯ್ವೆರ್ಚಿದಂ[6]ಸ
ಟ್ಟರ[6]ಯಿಂದತ್ತತ್ತಮತ್ತಂ ನಿಮಿರದಿರನಿದೇನೆಂದು ಜಾತಾ
ದ್ಭುತಂನೋ
ಳ್ಪರ ಕಣ್ಣುಂ ಚೇತಮುಂ ಕಾಲ್ಗಿಡೆ ಕಡುಜವದಿಂ
ವಿಷ್ಣುವರ್ಧಿಷ್ಣುವಾದಂ

ಈ ವಟುವಿಂಗೆ ಮಿಂಚುವೆಳಮಿಂಚಿನ[7]ವಾರಿನಲೇಖೆ[7]
ಮೌಂಜಿಯು
ಕೋವಣಮಾಯ್ತು ಮುಟ್ಟೆ ರವಿಗರ್ಘ್ಯಮುನೀವ[8]ಪ್ರೊಡಪ್ರ
ಮಾಯ್ತು[8]ಮ

1 ಆನೆಯ ಸೊಂಡಿಲು. 2 ಆಕಾಶದಿಂದ ಮೇಲಕ್ಕೆದ್ದ ಧ್ವ
3 ನಕ್ಷತ್ರವೆಂಬ ಹೂವಿನ ಗೊಂಚಲುಗಳಿಂದ ಕೂಡಿದ ಮರ. 4 ಆಕಾ
ಭಾಗ. 5 ಹಿಮಾಚಲ ಪರ್ವತ. 6 ಸುಂಟರುಗಾಳಿ. 7 ಮೋ
ರೇಖೆ. 8 ಕಾಂತಿ ಹೋಗಿ.

ಯಾವಿಗನೊಲ್ದು ಗುಂಡಿಗೆಯನಾಗಸಗಂಗೆಯ
ದಿವ್ಯತೋಯಮಂ
[1]ತೀವುವ[1] ಬುದ್ಧಿಯೊಳ್ ಬಗೆದನಕ್ಕಟ ಮಾಣಿ ನವ
ಪ್ರಮಾಣಮಂ ||

ಅಂಬರತಳಕ್ಕೆ ಬಳೆದು ತೆ
ಱಂಬೊಳೆವಚ್ಯುತನ ಚರಣದಂಡಂ ನಕ್ಷ
ತ್ರಂ ಬಳಸಿ ದೀಪ್ತಮಾಳೆಯ
ಕಂಬದವೋಲ್ ತೊಳಗಿ ಬೆಳಗುತಿರ್ದತ್ತಾಗಳ್ ||

ಬಲಿಹರನ ಚರಣದಂಡದ
ತಲೆಯೊಳ್ ಕಿಱುಗೊಂಡೆ[2]ಬಿಲ್ವ[2]ಬಾಂದೊಱೆಯಲರ್ಗಂ
ಡೊಲೆದುದು ವಿಷ್ಣುಕುಮಾರನ
ಗೆಲವಂ ಕಂಡಮರರೊಸೆದು ಕಟ್ಟಿದ ಗುಡಿವೊಲ್ ||

**ನೇಮಿಚಂದ್ರನ ಶೈಲಿ:** ನೇಮಿಚಂದ್ರನು ಚತುರ್ಭಾಷಾ ಪಂಡಿತ. ಕನ್ನಡ ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ನಿರಾಯಾಸವಾಗಿ ಕವಿತ್ವ ಮಾಡಬಲ್ಲ ಶಕ್ತಿ ಅವನಿಗಿದೆ. ಆತನ ಶಬ್ದ ಭಂಡಾರ ಬಲುಹಿರಿದು. ಆದುದರಿಂದಲೇ ಅವನ ಕಾವ್ಯಗಳಲ್ಲಿ ಇನ್ನಾವ ಕವಿಗಳಲ್ಲಿಯೂ ಸಿಕ್ಕಲಾರದಷ್ಟು ಅಪೂರ್ವ ಪದಗಳು ಸಿಕ್ಕುವುವು. ಅವನ ಬರವಣಿಗೆಗೆ ವಿಶೇಷ ಸಂಸ್ಕೃತ ಪದಗಳಿಂದ ತುಂಬಿರುತ್ತದೆ. ಕನ್ನಡ ಗ್ರಂಥವಾದರೂ ತನ್ನ ಪಾಂಡಿತ್ಯ ಮೋಹದಿಂದ ಸಂಸ್ಕೃತ ಶ್ಲೋಕಗಳನ್ನೂ ಪ್ರಾಕೃತ ಗಾಹೆಗಳನ್ನೂ ಮಧ್ಯೆ ಮಧ್ಯೆ ಸೇರಿಸಿರುತ್ತಾನೆ. ಕನ್ನಡದ

1 ತುಂಬುವ. 2 ಜೋಲಾಡುತ್ತಿರುವ.

ವೃತ್ತಗಳಾದ ತ್ರಿಪದಿ, ರಗಳೆ, ವೃತ್ತ ಕಂದಗಳನ್ನೇ ಅಲ್ಲದೆ ಸಂಸ್ಕೃತದಲ್ಲಿ ಅಪೂರ್ವವಾದ ವಸಂತತಿಲಕ, ದ್ರುತವಿಲಂಬಿತ, ಶಿಖರಿಣಿ, ಲಯೋತ್ತರ, ಆರ್ಯಾ ಮೊದಲಾದ ವೃತ್ತಗಳನ್ನೂ ಲೀಲಾಜಾಲವಾಗಿ ಉಪಯೋಗಿಸುತ್ತಾನೆ. ಅವನ ಉಪಮಾ ರೂಪಕಗಳು ಜೀವನದ ಬಹುಮುಖದಿಂದ ಆರಿಸಿಕೊಂಡವು. ಗಾಜಿಗೆ ಮಣಿಯಂ ಮಾಡುವ ಪೋಲ್, ಬೆಳ್ದಿಂಗಳಂ ತುಡುಕುವ ಗಗನಲಕ್ಷ್ಮಿಯಂತೆ, ಮಂದಸಿನೊಳ್ ಮಾಣಿಕ ಮಿರ್ಪಂತೆ, ಮಾಗಿಯೊಳ್ ಮಾಟದಮಲ್ಲಿಗೆವೂಗಳಂ ಮರುಳ್ದುಂಬಿಗೆ ತೋರ್ಪವೋಲ್, ಎಲೆಯೊಳ್ ಸುತ್ತಿದ ಮಲ್ಲಿಗೆಯಲರಂ ಕಂಪಿಂದಮಳಿಯ ಮೂಗಱಿವಂತೆ, ಮೇರುವಂ ಸಾರ್ದ ಕಾಗೆ ಪೊಂಬಣ್ಣ ಮಾದಂತಿರೆ, ಪಸುರಿಲೆಯ ಕುಸುಂಕಱೊಳಗೆ ರಸಾಯನದ ಕುಪ್ಪಿಗೆಯಿರ್ಪಂತೆ, ಶರೀರದಿಂ ಜೀವಂ ಪೊಱಮಟ್ಟು ಪೋಪಂತೆ. ಚಂದನಗ್ರಾಹಿಯಂ ಬೆನ್ನಟ್ಟಿಪೋಪ ಭುಜಗನಂತೆ. ಬೀದಿ ಬಯ್ತ್ತ ಭುವನ ಭಾಗ್ಯದೇವತೆಯಂತೆ, ಮಾಱಿಯುಱಿದಾಡಿನಂತೆ, ಪುಱಿಯೆ ಪಾಲಂ ಕಿಡಿಸುವಂತೆ, ಕವರುಕತ್ತಿಗೆ ಕಡಿತಂ ಬಂದಂತೆ, ಕುಲವಲ್ಲರಿಯಂ ಬೇರ್ವರಸು ಕಿತ್ತಿತ್ತುವಂತೆ, ಇಲಿಯುಲಪುರ್ಗೆಳ್ವ ಬೆಕ್ಕಿನಂತೆ, ಲೋಯಿಸರದ ಮೇಲೆ ಬಂಡಿ ಪರಿದಂತೆ, ಉಡುಗಣದ ನಡುವೆ ಮೃಗಧರನೆಡೆಗೊಂಡಂತೆ. ಸಱುಗಲ್ಲಂ ದಬ್ಬಕದಿಂದಿಱಿದೊಡೆ ಕಿಡಿ ಹಾಱುವಂತೆ, ನಾಱಿ ಮಸಗಿ ಬಿಗುಱಿದುಳಿದಂತೆ. ತುಂಬಿಗೆ ಪರಿಮಳಮಂ ಕೊಂಡು ಕೊನೆದು ಪೇೞ್ವವೋಲ್. ಸೋಂಕರ ಪಣೆಯ ನೆಱ್ತ್ರಿಱಿದಂತೆ, ಚಂದ್ರಿಕೆಯಂ ಪಡೆಯೆ ಪಯೋಧಿ ಪರಿಕ್ಷುಬ್ಧವಾದಂತೆ—ಈ ಮೊದಲಾದ ಉಪಮಾನಗಳು ಉಪಮೇಯದ ಸ್ಪಷ್ಟಚಿತ್ರವನ್ನು ಕಲ್ಪಿಸತಕ್ಕವಾಗಿವೆ. ಹಾಗೆಯೇ

ತವಿದು ಲೋಕವಿಜ್ಞಾನವು ವಿಸ್ತಾರವಾದುದರಿಂದ ಜನ ಸಾಮಾನ್ಯದ ಮಧ್ಯೆ ತಾಂಡವವಾಡುತ್ತಿರುವ ಅನೇಕ ಕನ್ನಡ ಸಂಸ್ಕೃತ ಲೋಕೋಕ್ತಿಗಳೂ ಚಾಟುವಚನಗಳೂ ಕಾವ್ಯ ದುದ್ದಕ್ಕೂ ಬರುವುವು. ಅಪುತ್ರಸ್ಯಗತಿರ್ನಾಸ್ತಿ, ವಿನೀತಿ ಧೂರ್ತಲಕ್ಷಣಂ, ಅಶೋವಿಘ್ನ ಪರಂಪರಾ, ಯಾವದಸ್ತಿ ಪ್ರತೀ ಕಾರಸ್ತಾವತ್ಕುರ್ಯಾತ್ ಪ್ರತಿಕ್ರಿಯಾಂ, ರವಿಕಾಣದುದಂ ಕವಿ ಕಾಣ್ಬಂ, ಮರುಗಂ ಪೂತುದು ಕರ್ಬು ಪಣ್ತುದು, ನೆಲನಂ ಪೊಯ್ದು ಕಯ್ ತಪ್ಪುಗುಂ ಆಚಾರ್ಯರ ವಚನಂ ತಪ್ಪದು, ಲತೆ ಯೆನಿತು ಬಲ್ಲಿತ್ತಾದೊಡಂ ಮರನಿಂ ಬಲ್ಲಿತ್ತಲ್ತು. ಪೂ ಮಾಲೆಗಂ ಪಾಶಕ್ಕಮುಜಗಜಾಂತರಂ, ನೀರೆಜಿನಿಯೆನಿತಲರ್ದೊಡಂ ಸಾರದೆಪೋದಂ ದಿನೇಶಂ, ಕಲ್ಪಿಸವೇಟ್ಟುದೆ ಪುರುಡಿನೊಳ್ ಪೆಂಡಿರ್ಗೆ ಪಾಂಡಿತ್ಯಮುಂ, ಶರ್ಕರೆ ನಾಲಗೆ ನೃಪರೆರ್ದೆ ಕತ್ತರಿ, ಎರ್ದೆಕತ್ತರಿ ನಾಲಗೆ ಬೆಲ್ಲಂ, ಬೇಡಿದ ಕಾಡೊಳ್ ಮುಟಿಕೊಂಡುದು, ನಚ್ಚಿನೆಮ್ಮೆ ಕೋಣನೀದುದು, ಸೊರ್ಕಾನೆ ದಿಂಬಂಗಾಡು ಹೋಳಿಗೆ, ಆನೆಯೆತ್ತುವಂಗಾಡು ಚಿಕ್ಕಾಡು, ಕನಸಿನ ಬತ್ತೆಸ್ಗೆ ಗೋಣಿಯಾಂಪರೆ, ಪಯೋರಸದಿಂಪಂ ಹಂಸೆ ಗುಪದೇಶಿಸ ಗಾಂಪನುಮೊಳನೆ–ಇವೇ ಮೊದಲಾದ ಉಕ್ತಿಗಳು ಕಾವ್ಯದಲ್ಲಿ ಆತ್ಮೀಯತೆಯನ್ನುಂಟುಮಾಡುತ್ತವೆ.

ನೇಮಿಚಂದ್ರನಿಗೆ ಮೃದುಪದ ಬಂಧುರತೆಯಿದೆ, ಪ್ರೌಢಿಮೆ ಯಿದೆ, ಪ್ರತಿಭೆ ಕಡಮೆ. ಬಹುಶಃ ಕಾಲದ ಜನರ ಅಭಿರುಚಿಗೆ ಮಾರುಹೋಗಿದ್ದಾನೆ. ವಸ್ತುವಿನ ಆಯ್ಕೆಯಲ್ಲಿಯೂ ಸ್ವಲ್ಪ ತಪ್ಪು ಮಾಡಿದ್ದಾನೆಂದು ಹೇಳಬಹುದು. ಲೀಲಾವತಿಯಂತಹ ಶೃಂಗಾರಕಾವ್ಯಕ್ಕಿಂತ ಪಂಪರನ್ನಾದಿಗಳಂತೆಯೇ ಆಗ ಅಭಿ ವೃದ್ಧಿಯಾಗುತ್ತಿದ್ದ ಹೊಯ್ಸಳರಾಜರಲ್ಲೊಬ್ಬನನ್ನು ನಾಯಕ

ರನ್ನಾಗಿ ಮಾಡಿಕೊಂಡು ವೀರರಸ ಪ್ರಧಾನವಾದ ಗ್ರಂಥವನ್ನು
ರಚಿಸಿದ್ದರೆ ಅವನ ಶಕ್ತಿ ಹೆಚ್ಚು ಪ್ರಕಾಶವಾಗುತ್ತಿತ್ತೆಂದ
ಕಾಣುತ್ತದೆ. ಕವಿಪಂಕ್ತಿಯಲ್ಲಿ ನೇಮಿಚಂದ್ರನಿಗೆ ಪ್ರಥಮ
ಸ್ಥಾನವಿಲ್ಲದಿದ್ದರೂ ದ್ವಿತೀಯ ಸ್ಥಾನಕ್ಕೆ ಸಂದೇಹವೇನೂ ಇಲ್ಲ

ಓಂ ತತ್ಸತ್

